# ಮೂಲ ಶಿಕ್ಷಣ

ಮೋ.ಕ.ಗಾಂಧಿ

ನವಜೀವನಪಬ್ಲಿಷಿಂಗ್ಹೌಸ್

ಅಹಮದಾಬಾದ್

ಕನ್ನಡಕ್ಕೆ: ಎಸ್. ಎನ್ ಗಣನಾಥ

ಚೈತನ್ಯ ಅಸೋಸಿಯೇಟ್ಸ್ , ಮೈಸೂರು



## ಸಂಪಾದಕರನುಡಿ

ಗಾಂಧೀಜಿಯವರುಭಾರತದೇಶಕ್ಕೆಹೊಸಮಾದರಿಯಶಿಕ್ಷಣದಕುರಿತಾಗಿತೀರಾಇತ್ತೀಚೆಗಷ್ಟೇಕಾರ್ಯಕ್ರಮವನ್ನುಆರಂಭಿಸಿದ್ದರೂ ಸಹಅವರುಬಹಳಹಿಂದಿನಿಂದಲೇಶಿಕ್ಷಣದಬಗ್ಗೆನಿರ್ಧರಿತಮತ್ತುಕ್ರಾಂತಿಕಾರೀನಿಲುವುಗಳನ್ನುಹೊಂದಿದ್ದರು. ಅವರೇನಮಗೆಹೇಳುವಂತೆಅನೇಕವರ್ಷಗಳಹಿಂದೆಅವರುದಕ್ಷಿಣಆಫ್ರಿಕಾದಲ್ಲಿಸ್ಥಾಪಿಸಿದ್ದ ಟಾಲ್‌ಸ್ಟಾಯ್ ಫಾರಂನಲ್ಲಿಮಕ್ಕಳಿಗೆಶಿಕ್ಷಣನೀಡುವಸಂದರ್ಭದಲ್ಲಿಈವಿಚಾರಗಳನ್ನುಅನುಷ್ಠಾನಗೊಳಿಸಿದ್ದರು. ಅದಾದನಂತರಭಾರತದಲ್ಲಿಎಲ್ಲೆಡೆ, ಕಾರ್ಮಿಕರುಮತ್ತುಮಕ್ಕಳುವಾಸಿಸುವಕಾಲೊನಿಗಳಲ್ಲಿಇದೇಮಾದರಿಯಶಿಕ್ಷಣವನ್ನುಅಳವಡಿಸಿಕೊಂಡಿದ್ದರು. ಅವರು 1937 ರಲ್ಲಿ ವ್ಯಾಪಕವಾಗಿ ಪ್ರತಿಪಾದಿಸಿದನಯೀತಾಲೀಮ್ ( ಹೊಸಶಿಕ್ಷಣ ) ಅವರಿಗೆಎಳ್ಳಷ್ಟೂಹೊಸದಾಗಿರಲಿಲ್ಲ.ಬದಲಾಗಿಅದನ್ನುಚಿಕ್ಕಗುಂಪುಗಳಲ್ಲಿಬರೋಬ್ಬರಿಮುವ್ವತ್ತುವರ್ಷಗಳಕಾಲನೈಜ ಸನ್ನಿವೇಶದಲ್ಲಿಅನುಷ್ಠಾನಗೊಳಿಸಿದ್ದರಿಂದಅದುನಿಜಕ್ಕೂಅರ್ಥಪೂರ್ಣಎಂದೆನಿಸಿದಚಿಂತನೆಯಾಗಿತ್ತು.

ಬ್ರಿಟಿಷರುಭಾರತದಲ್ಲಿಅಳವಡಿಸಿದಆಂಗ್ಲಭಾಷಾಮಾಧ್ಯಮದಶುದ್ಧಅಕ್ಷರಶಿಕ್ಷಣವುಸರಕಾರಕ್ಕೆಕಾರಕೂನರನ್ನುಒದಗಿಸುವಪ್ರಮುಖಗುರಿಯನ್ನುಹೊಂದಿತ್ತೇವಿನಃಉತ್ಪಾದನಾಕೌಶಲವನ್ನುಪ್ರಚೋದಿಸುವಅಥವಾಉದ್ಯಮಶೀಲತೆಯನ್ನುಬೆಳೆಸುವಉದ್ದೇಶವನ್ನುಹೊಂದಿರಲಿಲ್ಲ. ಇಂತಹಶಿಕ್ಷಣವುಶಿಕ್ಷಿತರನ್ನುತಮ್ಮಬಳಗದ ಜನರಿಂದದೂರವಿರಿಸುತ್ತದೆಯಲ್ಲದೆ,ಇನ್ನೂಮುಂದೆಹೋಗಿವಿದ್ಯಾರ್ಥಿಗಳುಗಳಿಸಿದಶಿಕ್ಷಣವುಸಮಾಜಕ್ಕೆಯಾವಬಗೆಯಪ್ರಾಯೋಗಿಕಪ್ರಯೋಜನವನ್ನೂನೀಡದಂತೆಮಾಡುತ್ತದೆಯೆನ್ನುವುದನ್ನೂಅವರುಗುರುತಿಸಿದ್ದರು.

ಪಾರಂಪರಿಕಗ್ರಾಮೀಣವ್ಯವಸ್ಥೆಯನ್ನುಬ್ರಿಟಿಷರುಹಾಳುಗೆಡವಿ, ಬೇರೆದೇಶಗಳಲ್ಲಿತಯಾರಾದಸರಕುಗಳನ್ನುತಂದುಭಾರತದಹಳ್ಳಿಗಳಲ್ಲಿಸುರಿದಿದ್ದರಿಂದಹಳ್ಳಿಗರುತಮ್ಮಉದ್ಯೋಗಗಳನ್ನುಕಳೆದುಕೊಂಡು, ಅಲ್ಲಿನ ಸಂರಚನೆಯಲ್ಲಿವ್ಯತ್ಯಯವಾಗಿ, ಅಸಹಾಯಕರಾಗಿರೂಪುಗೊಂಡುನಿಶ್ಚೇಷ್ಟಿತರಾದರು.ಅವರು ಕ್ರಮೇಣಬಡತನ, ನಿರುದ್ಯೋಗಮತ್ತುಹತಾಶೆಯೆಡೆಗೆಸಾಗಿದರು. ಈನಡುವೆಶಿಕ್ಷಿತರು, ಬಡವರನ್ನುತುಳಿದಾದರೂಸರಿ ; ತಾವುಪಡೆದಶಿಕ್ಷಣವುತಮ್ಮವೈಯಕ್ತಿಕಪ್ರಗತಿಯಹೆದ್ದಾರಿಯೆಂದೇಬಗೆದರು.ಆಕಾಲಘಟ್ಟದಲ್ಲಿಗಾಂಧೀಜಿಯವರುದೇಶವನ್ನುಉಳಿಸಲು ಗ್ರಾಮೀಣಆರ್ಥಿಕಬದುಕಿನಮರುಹುಟ್ಟುಮತ್ತುಶಿಕ್ಷಣವನ್ನುಅದರಜೊತೆಸಮೀಕರಿಸುವುದು, ಇದೊಂದೇಮಾರ್ಗವೆಂದುನಂಬಿದ್ದರು. ಹಾಗಾಗಿಶಿಕ್ಷಣವುಗ್ರಾಮೀಣವೃತ್ತಿಗಳನ್ನುಆಧರಿಸಿರಬೇಕೆಂದುಅವರುಪ್ರತಿಪಾದಿಸಿದರು. ತರಬೇತಿಯನೀಡುವುದರ ಮೂಲಕಮಕ್ಕಳನ್ನು ಸ್ವತಂತ್ರಉತ್ಪಾದಕರನ್ನಾಗಿಸಜ್ಜುಗೊಳಿಸಬೇಕೆಂದುಭಾವಿಸಿದರು. ಆದರೆ ಮಗುವಿನ ಒಳಿತಿನ ಬಗ್ಗೆ ಗಾಂಧೀಜಿಯವರಿಗಿದ್ದ ಆಸಕ್ತಿ ಎಷ್ಟೊಂದು ಆಳವಾಗಿತ್ತೆಂದರೆ ಮಗುವನ್ನು ಕೇವಲ ಆರ್ಥಿಕ ಅಗತ್ಯಗಳ ಪೂರೈಕೆಗೆ ಸಮರ್ಥ ಸಾಧನವನ್ನಾಗಿ ಬಳಸಿಕೊಂಡು ಆ ಮೂಲಕ ಮಗುವಿಗೆ ಅನ್ಯಾಯ ಮಾಡಲು ಬಿಡಲಿಲ್ಲ. ಹಾಗಾಗಿ, ಶಿಕ್ಷಣವು ಒಂದು ಕರಕುಶಲ ಸಾಮರ್ಥ್ಯದ ಸುತ್ತ ಅರಳುತ್ತದೆಯಾದರೂ ಮಗುವಿನ ಹಸ್ತಕೌಶಲ್ಯ ಮಾತ್ರವಲ್ಲದೇ ಬುದ್ಧಿ ಮತ್ತು ಹೃದಯಗಳನ್ನೂ ಹಾಗೆಯೇ ತರಬೇತಿ ನೀಡಿ ಸಜ್ಜುಗೊಳಿಸಬೇಕು ಎಂದು ಅವರು ಒತ್ತಿ ಹೇಳಿದರು. ಅಲ್ಲಿಯವರೆಗೆ ಚಾಲ್ತಿಯಲ್ಲಿದ್ದ ಬದುಕಿಗೆ ಸಂಬಂಧಿಸದ, ಯಾವುದೋ ಪರದೇಶದ ಭಾಷೆಯಲ್ಲಿ ಕಲಿಯುವ ಅಕೆಡೆಮಿಕ್ ಶಿಕ್ಷಣಕ್ಕೆ ವ್ಯತಿರಿಕ್ತವಾಗಿ ಈ ಶಿಕ್ಷಣವು ಮಗುವಿನ ಮಾತೃಭಾಷೆಯಲ್ಲಿದ್ದು, ಅರ್ಥಪೂರ್ಣವಾಗಿದ್ದು, ಮಗುವಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರವನ್ನೇ ಕೇಂದ್ರವಾಗಿಟ್ಟುಕೊಂಡು ಸಾವಯವ ಸಂಬಂಧ ಹೊಂದಿರಬೇಕಾಗಿದೆಎಂದು ಅವರು ಭಾವಿಸಿದರು.

ಹೀಗೆ ಕುಸಿಯುವ ಹಂತಕ್ಕೆ ತಲುಪಿದ್ದ ಆರ್ಥಿಕ ಮತ್ತು ಸಾಮಾಜಿಕ ಜೀವನದ ಪುನರುಜ್ಜೀವನದ ಗುರಿಯನ್ನು ಶಿಕ್ಷಣದ ಮೂಲಕ ಸಾಧಿಸುವ ಭರವಸೆಯನ್ನು ಗಾಂಧೀಜಿಯವರು ಹೊಂದಿದ್ದರೂ ಕೂಡ ಕರಕುಶಲ ಕಲೆಯ ಮಾಧ್ಯಮದ ಮಕ್ಕಳ ಶಿಕ್ಷಣವನ್ನು ಪ್ರತಿಪಾದಿಸಲು ಅವರಿಗೆ ಮತ್ತೂ ಒಂದು ಕಾರಣವಿದ್ದಿತು. ಇಂದು ಪೂರ್ಣ ಪ್ರಮಾಣದಲ್ಲಿ ಬೆಳೆದಿರುವ ಯಂತ್ರ ನಾಗರಿಕತೆಯು ರಾಷ್ಟ್ರದ ಹೆಚ್ಚಿನ ಪ್ರದೇಶಗಳು ಹಾಗೂ ಔದ್ಯೋಗಿಕವಾಗಿ ಹಿಂದುಳಿದ ಸಮುದಾಯದ ಗುಲಾಮಗಿರಿ ಮತ್ತು ಶೋಷಣೆಗೆ ಕಾರಣವಾಗಿದೆಯೆಂದು ಅವರಿಗೆ ಮನದಟ್ಟಾಗಿತ್ತು. ಜನರನ್ನು ಸ್ವಾತಂತ್ರ್ಯ ಮತ್ತು ಸ್ವಾವಲಂಬನೆಯೆಡೆಗೆ ಕರೆದೊಯ್ಯುವ ಬದಲಾಗಿ ಅದು ಕಾರ್ಮಿಕ ಮತ್ತಿತರ ಸಮುದಾಯವನ್ನು ಕೈಗಾರಿಕೆ ಮತ್ತು ಪ್ರಭುತ್ವದ ಹೊಣೆ ಹೊತ್ತ ಕೆಲವೇ ಮಂದಿಯ ಸಂಪೂರ್ಣ ಅಧೀನತೆ ಮತ್ತು ಅವಲಂಬನೆಗೆ ಗುರಿ ಮಾಡಿತ್ತು. ಇಷ್ಟೇ ಅಲ್ಲ, ಅದು ಜಗತ್ತಿನ ವಿವಿಧ ರಾಷ್ಟ್ರಗಳ ನಡುವೆ ನಿರಂತರ ವೈಷಮ್ಯ, ಯುದ್ಧಗಳು ಮತ್ತು ಪರಸ್ಪರ ವಿನಾಶಕ್ಕೂ ಕಾರಣವಾಯಿತು. ಹಾಗಾಗಿ ನಮ್ಮ ದೇಶದ ಜನರಿಗೆ ಇರುವ ಒಂದೇ ಭರವಸೆಯೆಂದರೆ ಬೃಹತ್ ಉದ್ದಿಮೆಗಳನ್ನು ನಿರಾಕರಿಸಿ ನಮ್ಮ ಆರ್ಥಿಕ ಬದುಕನ್ನು ಗ್ರಾಮ ಮಟ್ಟದ ಪುಟ್ಟ ಪುಟ್ಟ ಉತ್ಪಾದನಾ ಘಟಕವನ್ನು ಆಧರಿಸಿ ರೂಪಿಸುವುದು ಎನ್ನುವುದು ಅವರ ಚಿಂತನೆಯಾಗಿತ್ತು. ಇದು ಮತ್ತು ಇದೊಂದೇ ನಮ್ಮ ಕೆಲಸಗಾರರನ್ನು ಶಾಂತಿ, ಸ್ವಾತಂತ್ರ್ಯದ ಕಡೆಗೆ ಒಯ್ಯುತ್ತದೆ ಮತ್ತು ಅವರ ಆಂತರಿಕ ಸಾಮರ್ಥ್ಯ ಮತ್ತು ಜಾಣ್ಮೆಯನ್ನು ವೃದ್ಧಿಸಬಲ್ಲದು ಎಂದವರ ಸ್ಪಷ್ಟ ಅಭಿಪ್ರಾಯವಾಗಿತ್ತು. ಅವರ ದೃಷ್ಟಿಯಲ್ಲಿ ಸ್ವಾತಂತ್ರ್ಯ ಹಾಗೂ ವ್ಯಕ್ತಿಯ ಅಭಿವೃದ್ಧಿಯು – ಅದು ಎಷ್ಟು ನಗಣ್ಯ ಪ್ರಮಾಣದ್ದೇ

ಆಗಿರಲಿ – ಯಂತ್ರಗಳನ್ನು ಬಳಸಿ ಸರಕುಗಳನ್ನು ಹೆಚ್ಚಿಸುವುದಕ್ಕಿಂತ ಮುಖ್ಯ. ಈ ಕಾರಣಕ್ಕಾಗಿ ಅವರು ಕರಕುಶಲ ಮತ್ತು ಕೃಷಿ ಆಧಾರಿತ ಗ್ರಾಮೀಣ ಬದುಕಿನ ಮರುಹುಟ್ಟನ್ನು ಬಹುವಾಗಿ ಎದಿರು ನೋಡುತ್ತಿದ್ದರು. ಹಾಗಾದಾಗ ಜನರು ಹಳ್ಳಿಯ ಹತ್ತೂ ಜನರ ಒಳಿತಿಗಾಗಿ ನೆರೆಹೊರೆಯವರ ಸಲುವಾಗಿ ಮತ್ತು ಶಾಂತಿಗಾಗಿ ಒಟ್ಟಾಗಿ ಕೆಲಸ ಮಾಡುತ್ತಾರೆಂದು ನಂಬಿದ್ದರು. ಮಕ್ಕಳನ್ನು ಆ ಬಗೆಯ ಭವಿಷ್ಯಕ್ಕೆ ಸಜ್ಜುಗೊಳಿಸುವ ಶಿಕ್ಷಣವು ಕರಕುಶಲ ಕಲೆಯನ್ನೇ ಆಧರಿಸಿರಬೇಕು. ಹಾಗಾಗಿ ಅವರ ಸಂಪೂರ್ಣ ಶಿಕ್ಷಣ ವ್ಯವಸ್ಥೆಯು ಅಹಿಂಸೆ ಮತ್ತು  ಅತ್ಯಂತ ಕೆಳಸ್ತರದ ಮತ್ತು ಕಡೆಗಣಿಸಲ್ಪಟ್ಟ ವ್ಯಕ್ತಿಗೆ ಸ್ವಾತಂತ್ರ್ಯ ದೊರಕಿಸುವ ಆಶಯವನ್ನು ಹೊಂದಿತ್ತು.

ಆಧುನಿಕ ಜಗತ್ತು ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಮತ್ತು ಶಾಂತಿಯ ಕುರಿತಾಗಿ ತುದಿನಾಲಿಗೆಯ ಮಾತುಗಳನ್ನು ಆಡುತ್ತಲೇ ಬಂದಿದೆ. ಆದರೆ ಹಾಗೆ ಹೇಳುವವರು ಇವುಗಳಿಗೆ ಬೇಕಿರುವ ಅಡಿಪಾಯವನ್ನು ಆರ್ಥಿಕ ವ್ಯವಸ್ಥೆಯೊಳಗೆ ತರದಿದ್ದರೆ ಈ ಕನಸು ನನಸಾಗುವುದುಅಸಾಧ್ಯ ಎಂದು ಅರಿತಿಲ್ಲ. ನಾವು ಆರ್ಥಿಕ ವಲಯದಲ್ಲಿ ಏನನ್ನು ಬಿತ್ತುತ್ತೇವೆಯೋ ಅದನ್ನೇ ಬೆಳೆಯುತ್ತೇವೆ ಎಂದು ಗಾಂಧೀಜಿಯವರಂತೆ ಅರ್ಥ ಮಾಡಿಕೊಂಡ ಇನ್ನೊಬ್ಬರು ಇರಲಿಕ್ಕಿಲ್ಲ. ನಮ್ಮ ಆರ್ಥಿಕ ವ್ಯವಸ್ಥೆಯ ಗುರಿ ಸರಕುಗಳನ್ನು ಸಮೃದ್ಧವಾಗಿ ಉತ್ಪಾದಿಸುವುದು ಮಾತ್ರ ಆಗಿದ್ದರೆ ಅದು ಮಾತ್ರ ಸಾಧಿತವಾಗುತ್ತದೆ – ಸ್ವಾತಂತ್ರ್ಯ ಅಥವಾ ಶಾಂತಿ ಅಲ್ಲ. ಅದರೆ ನಮ್ಮ ಲಕ್ಷ್ಯವು ಸ್ವಾತಂತ್ರ್ಯ ಮತ್ತು ಶಾಂತಿ ಎನ್ನುವುದಾದರೆ ಆಗ ನಮ್ಮ ಸಂಪೂರ್ಣ ಆರ್ಥಿಕ, ರಾಜಕೀಯ, ಸಾಮಾಜಿಕ ಮತ್ತು ಶೈಕ್ಷಣಿಕ ವ್ಯವಸ್ಥೆಯು ಆ ಗುರಿಗಳನ್ನು ತಲುಪುವುದರ ಕಡೆ ಇರಬೇಕು. ಈ ಪ್ರಕ್ರಿಯೆಯಲ್ಲಿ ಭೌತಿಕ ಸರಕುಗಳು ಕೊಂಚಕಡಿಮೆಯಾದರೂ ಪರವಾಗಿಲ್ಲ. ಗಾಂಧೀಜಿಯವರ ಶೈಕ್ಷಣಿಕ ಯೋಜನೆಯು ಇಂದು ಇಡೀ ಮಾನವಕುಲವು ಆಶಿಸುತ್ತಿರುವ ಶಾಂತಿ ಮತ್ತು ಸ್ವಾತಂತ್ರ್ಯವನ್ನು ಸಾಧಿಸುವ ಏಕಮಾತ್ರ ಗುರಿಯನ್ನು ಹೊಂದಿದೆ.

ಇವೆರಡು ಸಂಗತಿಗಳು

1. ಬ್ರಿಟಿಷರು ಭಾರತದಲ್ಲಿ ಆಚರಣೆಗೆ ತಂದ ಕಾರ್ಯಸಾಧ್ಯವಲ್ಲದ ಸ್ವರೂಪದ ಶಿಕ್ಷಣ ಹಾಗೂ
2. ನಮ್ಮ ದೇಶದಲ್ಲಿ ಗಾಂಧೀಜಿಯವರು ಅನುಷ್ಠಾನಗೊಳಿಸಲು ಉದ್ದೇಶಿಸಿದ್ದ ಅಹಿಂಸಾ ಮಾರ್ಗ

ಅವರು ನಂತರದ ದಿನಗಳಲ್ಲಿ 'ಮೂಲ ಶಿಕ್ಷಣ' 'ಅಥವಾ ' ಹೊಸ ಶಿಕ್ಷಣ' ಎಂದು ಹೆಸರಿಸಿದ ಯೋಜನೆಯ ಹಿನ್ನೆಲೆಯಾಗಿ ಕಾರ್ಯ ನಿರ್ವಹಿಸಿದವು.

ಈ ಹಿನ್ನೆಲೆಯ ಹೊರತಾಗಿಯೂ, ಅದರ ಆಧಾರಸ್ತಂಭವಾಗಿದ್ದ ಶೈಕ್ಷಣಿಕ ಸಿದ್ಧಾಂತದ ಕಾರಣಗಳಿಂದಾಗಿಯೂ ಅವರ ಯೋಜನೆಯು ಮಹತ್ವದ್ದಾಗಿತ್ತು.

A. ಆ ಸಿದ್ಧಾಂತವು ವ್ಯಕ್ತಿಯ ನಿಜವಾದ ಶಿಕ್ಷಣವು ಆತನ ಆಂತರಿಕ ಸಾಮರ್ಥ್ಯದ  ಸಂಪೂರ್ಣ ವಿಕಾಸವೇ ಆಗಿದ್ದು ಅದನ್ನು ಕ್ರಿಯಾಶೀಲತೆಯ ಮೂಲಕವೇ ಅತ್ಯುತ್ತಮ ರೀತಿಯಲ್ಲಿ ಸಾಧಿಸಬಹುದಾಗಿದೆ.

   ಮಾನವನಲ್ಲಿಜೈವಿಕವಾಗಿಚಿಂತನಾಪರತೆಯುಕ್ರಿಯಾಶೀಲತೆಗೆಇಂಬುನೀಡುವಸಾಧನವಾಗಿಮಾತ್ರಅರಳುವುದಾಗಿವಿಕಾಸಮ

ನೋವಿಜ್ಞಾನಿಗಳು (Evolutionary Psychologists))ನಮಗೆಹೇಳುತ್ತಾರೆ.

ಹೀಗಾಗಿ,ಕ್ರಿಯೆಯಿಂದಹುಟ್ಟಿದಸಮಸ್ಯೆಗಳಹಿನ್ನೆಲೆಯಲ್ಲಿಜ್ಞಾನಮತ್ತುಅರಿವುಅರಳುತ್ತದೆಯೆಂಬನಿರ್ಧರಿತಮತ್ತುಗಟ್ಟಿನಿಲುವಿನ ತಳಹದಿಯಮೇಲೆಗಾಂಧೀಜಿಯವರಶೈಕ್ಷಣಿಕವ್ಯವಸ್ಥೆಯುನಿಂತಿದೆ.ಕ್ರಿಯೆಯಹೊರತಾಗಿಮನಸ್ಸಿಗೆತುರುಕುವಮಾಹಿತಿಯುಹೆಚ್ಚಿನಂಶಸ್ಮರಣಶಕ್ತಿಗೆಹೊರೆಯಾಗುತ್ತದೆಹಾಗೂಪ್ರಕೃತಿಯುನಮ್ಮನೆರವಿಗೆಬಂದುಅಂಥಕಲಿಕೆಯನ್ನುಅವಗಣಿಸದಿದ್ದರೆಅದುಬೌದ್ಧಿಕಅಜೀರ್ಣತೆಗೆಕಾರಣವಾಗುತ್ತದೆ.

B. ಮುಂದುವರಿಸಿಹೇಳುವುದಾದರೆ,

ಈಶಿಕ್ಷಣವುಮಗುವಿನಸಂಪೂರ್ಣಆಂತರಿಕಸಾಮರ್ಥ್ಯವನ್ನುಬೆಳೆಸುವಕೆಲಸಮಾಡುವುದಾದರೆಅದುಕರಕುಶಲ ಕೌಶಲದ ಮೂಲಕ ಮಾತ್ರ ಸಾಧ್ಯ.

ಏಕೆಂದರೆಮಗುವಿನಕೈಯಲ್ಲಿಅರಳುವಕರಕುಶಲಕೌಶಲವೇಅವನಿಗೆಸವಾಲುಗಳನ್ನುಒಡ್ಡಿಅದಕ್ಕೆಪ್ರತಿಸ್ಪಂದನೆಯಾಗಿಅವನಚಿಂತನೆ, ನೈತಿಕತೆ, ಚಾರಿತ್ರ್ಯಮತ್ತುಕಲಾಪ್ರಜ್ಞೆಯನ್ನುಹೊರಹೊಮ್ಮಲುಅನುವುಮಾಡಿಕೊಡುತ್ತವೆ. ಇದಕ್ಕೆವ್ಯತಿರಿಕ್ತವಾಗಿಕೇವಲ ಅಕ್ಷರ ಕೇಂದ್ರಿತ ಶಿಕ್ಷಣವುಮಗುವಿಗೆನೀಡುವಯಾವತ್ತೂತರಬೇತಿಗಳುಪ್ರತ್ಯೇಕವಿಭಾಗಗಳಲ್ಲಿಮಾತ್ರಅಸ್ತಿತ್ವದಲ್ಲಿರುತ್ತವೆ.

ದೈಹಿಕಕಾರ್ಯದಜೊತೆಜೊತೆಗೇಮನಸ್ಸಿನತರಬೇತಿಯೂನಡೆಯಬೇಕು,

ದೈಹಿಕಕಾರ್ಯದಲ್ಲಿಮನಸ್ಸಿನಜೊತೆಗೆಕೈಗಳುಮತ್ತುಕಣ್ಣುಗಳೂಸಹಭಾಗವಹಿಸಬೇಕು,

ಮನಸ್ಸುಮತ್ತುಕ್ರಿಯೆಗಳಜೊತೆಗೆಹೃದಯದಲ್ಲಿ ಕಲೆ ಹಾಗೂ ಧಾರ್ಮಿಕತೆಗಳುತುಂಬಿರಬೇಕು.ಆದರೆ ಮಗುವು ಒಂದು ಸಮಗ್ರ, ಸಾವಯವ ಘಟಕವಾಗಿರುವುದರಿಂದ ಮಗುವಿನ ಎಲ್ಲ ಬಗೆಯ ಸಾಮರ್ಥ್ಯಗಳನ್ನು ಒಟ್ಟಾರೆಯಾಗಿ ಹೊರತರುವ ತರಬೇತಿ ಮಾತ್ರ ಸಾಮರಸ್ಯದ ಮತ್ತು ಸಮತೋಲನದ ವ್ಯಕ್ತಿತ್ವವನ್ನು ವಿಕಸಿತಗೊಳಿಸುತ್ತದೆ ಎನ್ನುವುದು ಸ್ಪಷ್ಟವಾಗಿದೆ. ಅತಿಯಾದ ಪ್ರಾವೀಣ್ಯ ಮತ್ತು ವಿಭಾಗೀಕರಣವೇ ಪ್ರಧಾನವಾಗಿರುವ ಈ ಯುಗದಲ್ಲಿ , ಮಗುವಿನ ಶಿಕ್ಷಣದ ಸಲುವಾಗಿ ಗಾಂಧೀಜಿಯವರು ಪ್ರತಿಪಾದಿಸುತ್ತಿರುವ ಸಮಗ್ರತೆಯು ಸಮಯೋಚಿತವೂ ಮೌಲಿಕವೂ ಆಗಿದೆ.

ದುರದೃಷ್ಟವಶಾತ್, ತಮ್ಮಚಿಂತನೆಗಳನ್ನು ಕ್ರಮಬದ್ಧವಾಗಿ ಬೆಳೆಸಲು ಗಾಂಧೀಜಿಯವರಿಗೆ ಸಮಯ ದೊರೆಯದೆ ಹೋಯಿತು. ಅಲ್ಲದೆ ದೊಡ್ಡ ದೊಡ್ಡ ಪದಗಳ ಬೆನ್ನತ್ತಿ ತಮ್ಮ ಸಿದ್ಧಾಂತಗಳನ್ನು ಹಿಗ್ಗಿಸುವ ಕೆಲಸವೂ ಅವರಿಗೆ ಪಥ್ಯವಾಗುತ್ತಿರಲಿಲ್ಲ. ಅವರು ತಮ್ಮ ನಿರ್ಣಯಗಳನ್ನು ಕೃತಿಗೆ ಇಳಿಸಿದರು ಮತ್ತು ತಮ್ಮ ಚಿಂತನೆಗಳ ಗಟ್ಟಿತನಕ್ಕೆ ಅದೇ ನಿಜವಾದ ಸತ್ವಪರೀಕ್ಷೆ ಎಂದು ಪರಿಭಾವಿಸಿದರು.

ಈ ಕೃತಿಯಲ್ಲಿ ಅವರ ಬರಹ ಮತ್ತು ಭಾಷಣಗಳನ್ನು ಓದುಗರ ಅನುಕೂಲಕ್ಕಾಗಿ ವಿವಿಧ ಶೀರ್ಷಿಕೆಗಳಡಿಯಲ್ಲಿ ಮತ್ತು ಸಾಧ್ಯವಿದ್ದಾಗಲೆಲ್ಲಾ ಕಾಲಾನುಕ್ರಮದಲ್ಲಿ ಜೋಡಿಸಿಡುವ ಪ್ರಯತ್ನ ನಡೆದಿದೆ. ಇಲ್ಲಿ "ವಿಮರ್ಶೆ ಮತ್ತು ಸ್ಪಷ್ಟನೆಗಳು " ಎನ್ನುವ ಹೆಸರಿನ 'ಭಾಗ 5'ವಿಶೇಷವಾಗಿ ಆಸಕ್ತಿ ಹುಟ್ಟಿಸುತ್ತದೆ ಮತ್ತು ಇಲ್ಲಿ ಗಾಂಧೀಜಿಯವರು ಅನೇಕ ಸಂಶಯಗಳು ಮತ್ತು ಕಠಿಣತೆಗಳ ನಡುವೆ ತಮ್ಮ ಸಿದ್ಧಾಂತವನ್ನು ವ್ಯಾಖ್ಯಾನಿಸಿರುವುದರಿಂದ ಇದು ಬಹುಮುಖ್ಯ ಭಾಗವೂ ಆಗಿದೆ.

ಬಾಂಬೆ, 1 ಅಕ್ಟೋಬರ್ 1950 ಭರತನ್ ಕುಮಾರಪ್ಪ

ಪರಿವಿಡಿ

ಭಾಗ ನಾಲ್ಕು : ಶಿಕ್ಷಕರು



ಭಾಗ ಐದು : ಶಿಕ್ಷಕರು

# ಓದುಗರೊಂದಿಗೆ

ನನ್ನ ಲೇಖನಗಳ ಸೂಕ್ಷ್ಮಮತಿ ಓದುಗರು ಮತ್ತು ನನ್ನ ಲೇಖನಗಳಲ್ಲಿ ಆಸಕ್ತಿ ಇರುವ ಇತರರಿಗೆ ನಾನು ಹೇಳಲು ಬಯಸುವುದು ಇಷ್ಟೆ. ನನಗೆ ಅಭಿಮತದಲ್ಲಿ ಸ್ಥಿರತೆ (consistency) ಇದೆಯೆಂದು ತೋರಿಸಿಕೊಳ್ಳುವುದು ನನ್ನ ಕಾಳಜಿಯಲ್ಲವೇ ಅಲ್ಲ. ನನ್ನ ಸತ್ಯಾನ್ವೇಷಣೆಯ ಹಾದಿಯಲ್ಲಿ ನಾನು ಅನೇಕ ಐಡಿಯಾಗಳನ್ನು ಕೈಬಿಟ್ಟು ಇನ್ನು ಕೆಲವು ಹೊಸವನ್ನು ಕಲಿತುಕೊಂಡಿದ್ದೇನೆ. ನನಗೆ ವಯಸ್ಸಾಗಿದೆಯಾದರೂ ನಾನು ಆಂತರಿಕವಾಗಿ ಬೆಳೆಯುವುದನ್ನು ನಿಲ್ಲಿಸಿದ್ದೇನೆ ಎನ್ನುವ ಭಾವನೆ ನನ್ನಲ್ಲಿ ಬಂದೇ ಇಲ್ಲ ಹಾಗೂ ನನ್ನ ಮರಣದಲ್ಲಿ ಅದು ಸಮಾಪ್ತಿಯಾಗಬಹುದೆಂದೂ ನನಗೆ ಅನ್ನಿಸಿಲ್ಲ. ನನ್ನ ಸಂಪೂರ್ಣ ಕಾಳಜಿ ಇರುವುದು ಕ್ಷಣದಿಂದ ಕ್ಷಣಕ್ಕೆ, ನನ್ನ ದೇವರಾಗಿರುವ ಸತ್ಯದ ಕರೆಗೆ ಓಗೊಡುವುದು. ಹಾಗಾಗಿ ನನ್ನ ಎರಡು ಬರಹಗಳ ನಡುವೆ ಪರಸ್ಪರ ವೈರುದ್ಧ್ಯವನ್ನು ಯಾರಾದರೂಕಂಡರೆ, ಅವರಿಗೆ ನನ್ನ ವಿವೇಕದ ಕುರಿತಾಗಿ ನಂಬಿಕೆಯೇನಾದರೂ ಇನ್ನೂ ಉಳಿದಿದ್ದರೆ ಅವರು ಒಂದು ವಿಷಯದ ಬಗ್ಗೆ ನನ್ನ ಎರಡು ಅಭಿಪ್ರಾಯಗಳಲ್ಲಿ ತರುವಾಯದ ಅಭಿಪ್ರಾಯವನ್ನು ಆರಿಸಿಕೊಳ್ಳುವುದು ಸಮಂಜಸ.

ಹರಿಜನ್ 29.4.1933 p. 2 ಮೋ.ಕ. ಗಾಂಧಿ

# ಭಾಗ ಒಂದು: ಹೊಸ ಶಿಕ್ಷಣ

## 1

## ಹೊಸ ಶಿಕ್ಷಣದ ಅಗತ್ಯ

ಸಂಪಾದಕ : ಶಿಕ್ಷಣದ ಸಾಮಾನ್ಯ ಅರ್ಥವು ಅಕ್ಷರಜ್ಞಾನ ಎನ್ನುವುದಾಗಿದೆ.ಮಕ್ಕಳಿಗೆ ಓದುವುದು, ಬರೆಯುವುದು ಮತ್ತು ಗಣಿತವನ್ನು ಕಲಿಸುವುದನ್ನು ಪ್ರಾಥಮಿಕ ಶಿಕ್ಷಣ ಎಂದು ಕರೆಯಲಾಗುತ್ತದೆ. ಒಬ್ಬ ರೈತ ತನ್ನ ಅನ್ನವನ್ನು ಪ್ರಾಮಾಣಿಕ ದುಡಿಮೆಯಿಂದ ಗಳಿಸುತ್ತಾನೆ. ಆತನಿಗೆ ಪ್ರಪಂಚದ ಕುರಿತಾಗಿ ಸಾಮಾನ್ಯ ಮಟ್ಟದ ತಿಳಿವಳಿಕೆಯಿದೆ. ತನ್ನ ತಂದೆ–ತಾಯಿಯರೊಂದಿಗೆ, ಮಡದಿ, ಮಕ್ಕಳೊಂದಿಗೆ ಮತ್ತು ಇತರ ಹಳ್ಳಿಗರೊಂದಿಗೆ ಹೇಗೆ ವರ್ತಿಸಬೇಕೆನ್ನುವುದು ಅವನಿಗೆ ಗೊತ್ತಿದೆ. ಚಾರಿತ್ರ್ಯದ ನಿಯಮಗಳನ್ನು ಅವನು ಅರ್ಥ ಮಾಡಿಕೊಳ್ಳುತ್ತಾನೆ ಹಾಗೂ ಅವುಗಳನ್ನು ಅನುಸರಿಸುತ್ತಾನೆ. ಆದರೆ ಆತ ತನ್ನ ಹೆಸರನ್ನು ಸಹ ಬರೆಯಲಾರ. ಅವನಿಗೆ ಅಕ್ಷರಜ್ಞಾನವನ್ನು ಕೊಡುವುದರಿಂದ ನೀವು ಏನನ್ನು ಸಾಧಿಸಲು ಬಯಸುತ್ತಿದ್ದೀರಿ? ಅವನ ಆನಂದಕ್ಕೆ ನೀವು ಒಂದು ಗುಲಗಂಜಿಯಷ್ಟನ್ನಾದರೂ ಸೇರಿಸಲು ಸಾಧ್ಯವಿದೆಯೇ? ಅವನಿಗೆ ತನ್ನ ಗುಡಿಸಲು ಇಲ್ಲವೇ ಅವನ ಸರ್ವಸ್ವದ ಬಗ್ಗೆ ಅತೃಪ್ತಿ ಮೂಡಿಸುವುದು ನಿಮ್ಮ ಉದ್ದೇಶವೇನು? ನೀವು ಹಾಗೆ ಮಾಡಲು ಬಯಸಿದರೂ ಅವನಿಗೆ ಅಂಥ ಶಿಕ್ಷಣದ ಅಗತ್ಯವಿಲ್ಲ. ಪಾಶ್ಚಾತ್ಯ ಚಿಂತನೆಯ ಪ್ರವಾಹಕ್ಕೆ ಸಿಲುಕಿರುವ ನಾವು ಅದರ ಸಾಧಕ–ಬಾಧಕಗಳನ್ನು ತೂಗಿ ನೋಡದೆ ಆ ಬಗೆಯ ಶಿಕ್ಷಣವನ್ನು ನಮ್ಮ ಜನರಿಗೆ ನೀಡಬೇಕೆಂಬ ನಿರ್ಣಯಕ್ಕೆ ಬಂದುಬಿಟ್ಟಿದ್ದೇವೆ.

ಈಗ ಉನ್ನತ ಶಿಕ್ಷಣದ ಕಡೆ ಸ್ವಲ್ಪ ಗಮನ ಹರಿಸೋಣ. ನಾನು ಭೂಗೋಳ, ಖಗೋಳ, ಬೀಜಗಣಿತ ಮತ್ತು ರೇಖಾಗಣಿತವನ್ನು ಕಲಿತಿದ್ದೇನೆ. ಅದರಿಂದೇನು? ವೈಯಕ್ತಿಕವಾಗಿ ಇಲ್ಲವೇ ನನ್ನ ಸುತ್ತಲಿನವರಿಗೆ ಅದರಿಂದ ಏನು ಪ್ರಯೋಜನವಾಗಿದೆ? ಇವೆಲ್ಲವನ್ನೂ ನಾನೇಕೆ ಕಲಿತೆ? ಪ್ರೊಫೆಸರ್ ಹಕ್ಸ್ಲಿಯವರು ಶಿಕ್ಷಣವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ.

¨ ತನ್ನ ಯೌವನದಲ್ಲಿ ಪಡೆದ ತರಬೇತಿಯಿಂದಾಗಿ, ಆತನ ಶರೀರವು  ಆತನ ಮನಸ್ಸಿಗೆ ಅಡಿಯಾಳಾಗಿರುವುದಲ್ಲದೆ ಆ ಶರೀರವು ಮಾಡಬಹುದಾದ ಎಲ್ಲ ಕೆಲಸಗಳನ್ನೂ ಸರಾಗವಾಗಿ ಮತ್ತು ಸಂತೋಷದಿಂದ ನಿರ್ವಹಿಸುತ್ತದೆ; ಅವನ ಬುದ್ಧಿಶಕ್ತಿಯು ಸ್ಪಷ್ಟವಾದ, ತಣ್ಣನೆಯ, ತಾರ್ಕಿಕ ಸ್ವರೂಪದ್ದಾಗಿದ್ದು ಸಮತೋಲನವನ್ನು ಹೊಂದಿರುತ್ತದೆ; ನಿಸರ್ಗದ ಮೂಲ ಸತ್ಯಗಳ ಜ್ಞಾನವನ್ನು ಆತ ಹೊಂದಿರುತ್ತಾನೆ; ಆತನ ಆಸ್ಥೆಯು ಅವನ ಇಚ್ಛಾಶಕ್ತಿಗೆ ದಾಸನಾಗಿರಬೇಕು; ಎಲ್ಲ ಬಗೆಯ ದುಷ್ಟತನಗಳಿಂದ ದೂರವಿರಬೇಕು ಮತ್ತು 'ತನ್ನಂತೆಯೇ ಪರರನ್ನು ಬಗೆಯುವ' ಮನೋಭಾವವನ್ನು ಹೊಂದಿರಬೇಕು; ಇಂಥ ಗುಣಗಳುಳ್ಳ

ವ್ಯಕ್ತಿಯು ಮುಕ್ತ ಶಿಕ್ಷಣ (Liberal Education) ವನ್ನು ಪಡೆದಿದ್ದಾನೆ ಎಂದು ಹೇಳಬಹುದು. ಏಕೆಂದರೆ, ಆತ ನಿಸರ್ಗದೊಂದಿಗೆ ಸಾಮರಸ್ಯವನ್ನು ಸಾಧಿಸಿರುತ್ತಾನೆ. ಹಾಗಿಲ್ಲದವರಿಗೆ ಮುಕ್ತ ಶಿಕ್ಷಣ ದೊರಕಿದೆ ಎನ್ನುವುದನ್ನು ನಾನು ಒಪ್ಪಿಕೊಳ್ಳಲಾರೆ."

ಇದು ನೈಜ ಶಿಕ್ಷಣವಾಗಿದ್ದರೆ, ನಾನು ಈ ಹಿಂದೆ ಹೇಳಿದ ವಿಜ್ಞಾನಗಳು ನನ್ನ ಇಂದ್ರಿಯಗಳನ್ನು ನನ್ನ ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಪ್ರಯೋಜನಕ್ಕೆ ಬಂದಿರಲಿಲ್ಲ ಎಂದು ಘಂಟಾಘೋಷವಾಗಿ ಹೇಳಲು ಬಯಸುತ್ತೇನೆ. ಹಾಗಾಗಿ, ನೀವು ಪಡೆದಿರುವುದು ಪ್ರಾಥಮಿಕ ಶಿಕ್ಷಣವಾದರೂ ಆಗಿರಲಿ, ಇಲ್ಲವೇ ಉನ್ನತ ಶಿಕ್ಷಣವಾದರೂ ಆಗಿರಲಿ, ಜೀವನದ ಬಹುಮುಖ್ಯಕಾರ್ಯಗಳಿಗೆ ಅದರ ಅಗತ್ಯವಿಲ್ಲ. ಅದು ನಮ್ಮನ್ನು ಮಾನವರನ್ನಾಗಿ ಬೆಳೆಸುವುದಿಲ್ಲ. ಅಲ್ಲದೆ ನಮ್ಮ ಕರ್ತವ್ಯಗಳನ್ನು ನಿರ್ವಹಿಸಲು ಅದು ನಮಗೆ ಸಹಾಯಕವಾಗುವುದಿಲ್ಲ.

ಓದುಗ: ಹಾಗಾದರೆ, ನಾನೀಗ ನಿಮ್ಮನ್ನು ಇನ್ನೊಂದು ಪ್ರಶ್ನೆ ಕೇಳಬೇಕಿದೆ.ಇದೆಲ್ಲವನ್ನೂ ನೀವು ನನಗೆ ಹೇಳಲು ಹೇಗೆ ಸಾಧ್ಯವಾಯಿತು? ನಿಮಗೆ ಉನ್ನತ ಶಿಕ್ಷಣ ದೊರೆತಿರದಿದ್ದರೆ ಈ ವಿಷಯಗಳನ್ನು ನೀವು ನನಗೆ ಹೇಳಲು ಹೇಗೆ ಸಾಧ್ಯವಾಗುತ್ತಿತ್ತು?

ಸಂಪಾದಕ : ನೀವು ಹೇಳಿರುವುದು ಚೆನ್ನಾಗಿದೆ. ಆದರೆ ಇದಕ್ಕೆ ನನ್ನ ಉತ್ತರ ಸರಳವಿದೆ. ನನಗೆ ಉನ್ನತ ಅಥವಾ ಉನ್ನತವಾಗಿಲ್ಲದ ಶಿಕ್ಷಣ ದೊರೆತಿರದೇ ಇದ್ದರೆ ನನ್ನ ಜೀವನ ವ್ಯರ್ಥವಾಗುತ್ತಿತ್ತು ಎಂದು ನನಗೆ ಒಂದು ಕ್ಷಣವೂ ಅನಿಸಿದ್ದೇ ಇಲ್ಲ. ನಾನು ಮಾತನಾಡುತ್ತೇನೆ ಮತ್ತು ಆ ಕಾರಣದಿಂದಲೇ ನಾನು ಸೇವೆ ಮಾಡುತ್ತಿದ್ದೇನೆ ಎನ್ನುವ ಭಾವವೂ ನನ್ನದಲ್ಲ. ಆದರೆ ಸೇವೆ ಎನ್ನುವುದು ನನಗಿಷ್ಟ ಮತ್ತು ಆ ಆಶಯವನ್ನು ಈಡೇರಿಸಿಕೊಳ್ಳಲು ನನಗೆ ದೊರೆತ ಶಿಕ್ಷಣವನ್ನು ನಾನು ಬಳಸಿಕೊಳ್ಳುತ್ತೇನೆ. ನಾನು ಅದನ್ನು ಬಳಸುವಾಗಲೂ ನಾನು ಗಳಿಸಿದ ಶಿಕ್ಷಣವು ನಿಮ್ಮಂಥ ಕೆಲವರಿಗೆ ಮಾತ್ರ ಪ್ರಯೋಜನವಾಗುತ್ತದೆಯೇ ಹೊರತು ಉಳಿದ ಲಕ್ಷಾಂತರ ಮಂದಿಗಲ್ಲ. ನಾನು ಹೇಳಿದ್ದನ್ನೇ ಇದು ಮತ್ತೊಮ್ಮೆ ಸಮರ್ಥಿಸುತ್ತದೆ. ನೀವು ಮತ್ತು ನಾನು ಪ್ರಮುಖವಾಗಿ ಮಿಥ್ಯ ಶಿಕ್ಷಣ ಎಂದು ಕರೆಯಬಹುದಾದ ಪೀಡೆಯನ್ನು ಪಡೆದಿದ್ದೇವೆ.

ನಾನು ಇದರ ಕಾಟದಿಂದ ಪಾರಾಗಿ ಬಂದಿದ್ದೇನೆ ಎಂದು ಹೇಳಿಕೊಳ್ಳುತ್ತಿದ್ದೇನೆ ಮತ್ತು ನನ್ನ ಆ ಅನುಭವವನ್ನು ನಿಮ್ಮೊಡನೆ ಹಂಚಿಕೊಳ್ಳಲು ಉತ್ಸುಕನಾಗಿದ್ದೇನೆ. ಹಾಗೆ ಮಾಡುವ ಪ್ರಕ್ರಿಯೆಯಲ್ಲಿ ನಾನು ಈ ಶಿಕ್ಷಣ ಪದ್ಧತಿಯ ಕೊಳಕುಗಳನ್ನು ನಿಮ್ಮ ಮುಂದಿಡುತ್ತಿದ್ದೇನೆ.

ಇದಕ್ಕೆ ಒಂದು ಮಾತು ಸೇರಿಸಬೇಕು. ಎಲ್ಲ ಸನ್ನಿವೇಶಗಳಲ್ಲಿಯೂ ಅಕ್ಷರಜ್ಞಾನವು ನಿರುಪಯುಕ್ತ ಎನ್ನುವಂಥ ಮಾತುಗಳನ್ನು ನಾನು ಹೇಳಿಯೇ ಇಲ್ಲ. ಆದರೆ ಅದೇನೋ ಅದ್ಭುತ , ಮಾಂತ್ರಿಕ ಪರಿಹಾರ ಎಂದು ಪರಿಗಣಿಸಬಾರದು ಎಂದಷ್ಟೇ ನನ್ನ ನಿಲುವು. ಅದು ಎಲ್ಲ ವರಗಳನ್ನು ನೀಡಬಲ್ಲ ಕಾಮಧೇನುವಲ್ಲ. ಅದರ ಸ್ಥಾನದಲ್ಲಿ ಅದು ಪ್ರಯೋಜನಕಾರಿಯೇ ಹೌದು. ನಮ್ಮ ಇಂದ್ರಿಯಗಳ ನಿಯಂತ್ರಣ ನಮಗಿದ್ದಾಗ ಹಾಗೂ ನಮ್ಮ ಮೌಲ್ಯಗಳು ಗಟ್ಟಿ ತಳಹದಿಯ ಮೇಲಿದ್ದಾಗ ಅಕ್ಷರಜ್ಞಾನವು ಉಪಯುಕ್ತ ಎನ್ನಬಹುದು. ಆ ಶಿಕ್ಷಣವನ್ನು ಹೊಂದಲು ನಾವು ಉತ್ಸುಕರಾಗಿದ್ದರೆ ನಾವು ಅದರ ಪ್ರಯೋಜನವನ್ನು ಖಂಡಿತಕ್ಕೂ ಪಡೆದುಕೊಳ್ಳುತ್ತೇವೆ. ಅದು ಭೂಷಣಪ್ರಾಯವಾಗಿ ಇರುತ್ತದೆಂದರೆ ತಪ್ಪಿಲ್ಲ. ಈ ಹಿನ್ನೆಲೆಯಲ್ಲಿ ಅಂತಹ ಶಿಕ್ಷಣವನ್ನು ಕಡ್ಡಾಯ

ಮಾಡಬಾರದು ಎನ್ನುವುದು ಇದರಿಂದ ಸ್ಪಷ್ಟ. ನಮ್ಮ ಪಾರಂಪರಿಕ ಶಾಲಾ ಪದ್ಧತಿಯೇ ಸಾಕು ಎನ್ನುವುದು ನನ್ನ ಅಭಿಪ್ರಾಯ. ಅದರ ಮುಖ್ಯ ಆದ್ಯತೆ ಚಾರಿತ್ರ್ಯ ನಿರ್ಮಾಣವಾಗಿದ್ದು ಅದಕ್ಕೆ ಪ್ರಾಧಾನ್ಯತೆ ಪ್ರಾಪ್ತವಾಗಿರುತ್ತದೆ. ಆ ಅಡಿಪಾಯದ ಮೇಲೆ ಕಟ್ಟಿರುವ ಕಟ್ಟಡವು ಬಹುಕಾಲ ನಿಂತಿರುತ್ತದೆ.

ಓದುಗ : ಸ್ವಯಂ ಆಡಳಿತದ ( Home rule) ಹಕ್ಕನ್ನು ಪಡೆಯಲು ಇಂಗ್ಲೀಷ್ ಶಿಕ್ಷಣವು ಅನಗತ್ಯ ಎಂದು ನೀವು ಪ್ರತಿಪಾದಿಸುತ್ತೀರೆಂದು ನಾವು ಭಾವಿಸಬಹುದೇ?

ಸಂಪಾದಕ: ನನ್ನ ಉತ್ತರ 'ಹೌದು' ಮತ್ತು 'ಇಲ್ಲ'. ಮಿಲಿಯಗಟ್ಟಲೆ ಜನರಿಗೆ ಇಂಗ್ಲೀಷಿನ ಜ್ಞಾನ ನೀಡುವುದೆಂದರೆ ಅವರನ್ನು ಗುಲಾಮಗಿರಿಗೆ ದೂಡಿದಂತೆ. ಶಿಕ್ಷಣಕ್ಕಾಗಿ ಮೆಕಾಲೆ ಹಾಕಿದ ಬುನಾದಿ ನಮ್ಮನ್ನು ಈಗಾಗಲೇ ಗುಲಾಮಗಿರಿಗೆ ದೂಡಿದೆ. ಆತನಿಗೆ ಆ ಉದ್ದೇಶವಿತ್ತೆಂದು ನಾನು ಹೇಳುತ್ತಿಲ್ಲವಾದರೂ ಪರಿಣಾಮ ಮಾತ್ರ ಅದೇ ಆಗಿದೆ. ನಾವಿಂದು ಸ್ವಯಂ ಆಡಳಿತದ ಕುರಿತಾಗಿ ವಿದೇಶೀ ಭಾಷೆಯಲ್ಲಿ ಮಾತನಾಡಬೇಕಾಗಿ ಬಂದಿರುವುದು ದುಃಖಕರ ಸಂಗತಿಯಲ್ಲದೇ ಇನ್ನೇನು?

ಯೂರೋಪಿಯನ್ನರು ತ್ಯಜಿಸಿದ ಶಿಕ್ಷಣ ಪದ್ಧತಿಯನ್ನು ನಾವು ಇನ್ನೂ ಜೀವಂತವಾಗಿಟ್ಟಿದ್ದೇವೆ ಎನ್ನುವುದನ್ನು ಗಮನಿಸಬೇಕಾಗಿದೆ. ಅಲ್ಲಿಯ ಪರಿಣತರು ನಿರಂತರವಾಗಿ ಬದಲಾವಣೆಗಳನ್ನು ಮಾಡುತ್ತಿರುತ್ತಾರೆ. ನಾವೋ ಅಲ್ಲಿ ತಿರಸ್ಕೃತವಾದ ವ್ಯವಸ್ಥೆಯನ್ನು ಇಲ್ಲಿ ಇಂದಿಗೂ ಬಳಸುತ್ತಿದ್ದೇವೆ. ಪ್ರತಿಬಾರಿಯೂ ಅದು ಇನ್ನಷ್ಟು ಉತ್ತಮಗೊಳ್ಳಬೇಕೆಂದು ಅವರು ಪ್ರಯತ್ನಿಸುತ್ತಲೇ ಇರುತ್ತಾರೆ.

ಇಂಗ್ಲೆಂಡಿನಲ್ಲಿ ಬಹು ಚಿಕ್ಕ ಭೂಭಾಗವಾದ ವೇಲ್ಸ್ ಇದೆ. ಅಲ್ಲಿಯ ಜನರಿಗೆ ವೆಲ್ಷ್ ಭಾಷೆಯನ್ನು ಕಲಿಸಲು ಇನ್ನಿಲ್ಲದ ಪ್ರಯತ್ನಗಳು ನಿರಂತರವಾಗಿ ನಡೆಯುತ್ತಿವೆ. ವೇಲ್ಸಿನ ಮಕ್ಕಳಿಗೆ ಆ ಭಾಷೆ ಕಲಿಸಲು ಚಾನ್ಸೆಲರ್ ಅವರೇ ಮುಂದೆ ನಿಂತು ಕಾರ್ಯಕ್ರಮವನ್ನು ರೂಪಿಸುತ್ತಿದ್ದಾರೆ. ಆದರೆ ನಾವಿಲ್ಲಿ ಮಾಡುತ್ತಿರುವುದೇನು? ನಾವು ಪರಸ್ಪರರಿಗೆ ಇಂಗ್ಲೀಷಿನಲ್ಲಿ – ಅದರಲ್ಲೂ ತಪ್ಪು ತಪ್ಪು ಇಂಗ್ಲೀಷಿನಲ್ಲಿ – ಪತ್ರ ಬರೆಯುತ್ತಿದ್ದೇವೆ;M. A .ಪದವೀಧರರೂ ಇದಕ್ಕೆ ಹೊರತಾಗಿಲ್ಲ. ನಮ್ಮ ಅತ್ಯುತ್ತಮ ವಿಚಾರಗಳನ್ನು ಇಂಗ್ಲೀಷಿನಲ್ಲಿ ವ್ಯಕ್ತಪಡಿಸುತ್ತಿದ್ದೇವೆ. ಕಾಂಗ್ರೆಸ್ ಪಕ್ಷದ ಸಭೆಯ ನಡಾವಳಿಗಳು ಇಂಗ್ಲೀಷಿನಲ್ಲಿವೆ. ನಮ್ಮ ಅತ್ಯುತ್ತಮ ವಾರ್ತಾಪತ್ರಿಕೆಗಳು ಇಂಗ್ಲೀಷಿನಲ್ಲಿವೆ. ಇದು ಬಹುಕಾಲ ಹೀಗೆಯೇ ಮುಂದುವರಿದರೆ, ನನ್ನ ಅಭಿಪ್ರಾಯದಲ್ಲಿ ಮುಂದಿನ ಪೀಳಿಗೆ ನಮ್ಮನ್ನು ಹೀಗಳೆದು ಶಾಪ ಹಾಕುವುದಂತೂ ಖಂಡಿತ.

ಇಂಗ್ಲೀಷ್ ಶಿಕ್ಷಣ ಪಡೆದ ಕಾರಣದಿಂದ ನಾವು ಈ ರಾಷ್ಟ್ರವನ್ನು ಗುಲಾಮಗಿರಿಗೆ ದೂಡಿದ್ದೇವೆ ಎನ್ನುವ ಸಂಗತಿಯನ್ನು ಗಮನಿಸುವುದು ಬಹಳ ಮುಖ್ಯ. ಆಷಾಢಭೂತಿತನ ಮತ್ತು ದಬ್ಬಾಳಿಕೆಗಳು ಮೊದಲಿಗಿಂತ ಹೆಚ್ಚಾಗಿವೆ. ಇಂಗ್ಲೀಷ್ ತಿಳಿದ ಭಾರತೀಯರು ಮೋಸ ಮಾಡುವುದರಲ್ಲಿ ಮತ್ತು ಭಯವನ್ನು ಜನರಲ್ಲಿ ಹುಟ್ಟುಹಾಕುವುದರಲ್ಲಿ ಹಿಂದೆ ಮುಂದೆ ನೋಡಿಲ್ಲ.

ನಾವು ಜನರಿಗೆ ಏನನ್ನಾದರೂ ಮಾಡುತ್ತಿದ್ದೇವೆ ಎಂದರೆ ನಾವು ನಮ್ಮ ಮೇಲಿರುವ ಋಣದ ಸ್ವಲ್ಪ ಭಾಗವನ್ನು ಅವರಿಗೆ ಮರಳಿಸುತ್ತಿದ್ದೇವೆ ಎಂದು ಮಾತ್ರ ಅರ್ಥ.

ನಾನು ನ್ಯಾಯಾಲಯಕ್ಕೆ ಹೋಗಬೇಕಾದಾಗ ನನ್ನ ಸಂವಹನ ಮಾಧ್ಯಮವಾಗಿ ಇಂಗ್ಲೀಷ್ ಅನ್ನು ಬಳಸಬೇಕು ಎನ್ನುವುದು ನಮಗೆಲ್ಲರಿಗೂ ನೋವನ್ನುಂಟುಮಾಡುವ ಸಂಗತಿ ಅಲ್ಲವೇ? ನಾನು ವಕೀಲನಾದಾಗ, ನನ್ನ ಮಾತೃಭಾಷೆಯನ್ನು ಮಾತನಾಡಬಾರದು ಹಾಗೂ ಬೇರೊಬ್ಬ ವ್ಯಕ್ತಿ ನನ್ನ ಭಾಷೆಯಿಂದ ನನಗೇ ಅನುವಾದಿಸಿ ಹೇಳಬೇಕು ಎನ್ನುವುದೂ ನೋವಿನ ಸಂಗತಿಯಲ್ಲದೇ ಬೇರೇನು? ಇದು ಭಾರಿ ಅವಿವೇಕಿತನವಲ್ಲವೇ? ಇದು ಗುಲಾಮಗಿರಿಯ ಸಂಕೇತವಲ್ಲವೇ? ಇದಕ್ಕೆ ಇಂಗ್ಲೀಷನ್ನು ದೂಷಿಸುವುದೇ ಅಥವಾ ನಾನು ನನ್ನನ್ನೇ ದೂಷಿಸಿಕೊಳ್ಳಬೇಕೇ? ಅಂದರೆ ಇಂಗ್ಲೀಷ್ ತಿಳಿದಿರುವ ಭಾರತೀಯರು ನಮ್ಮ ದೇಶವನ್ನು ಗುಲಾಮಗಿರಿಗೆ ತಳ್ಳಿದ್ದೇವೆ. ಈ ದೇಶದ ಶಾಪ ನಮ್ಮ ಮೇಲಿದೆ ; ಬ್ರಿಟಿಷ್ ಸಮುದಾಯದ ಮೇಲೆ ಅಲ್ಲ.

ನಿಮ್ಮ ಕೊನೆಯ ಪ್ರಶ್ನೆಗೆ ನನ್ನ ಉತ್ತರ 'ಹೌದು' ಮತ್ತು 'ಇಲ್ಲ' ಎಂದು ನಿಮಗೆ ಹೇಳಿದ್ದೆ. 'ಹೌದು" ಏಕೆಂದು ವಿವರಿಸಿದ್ದೇನೆ. ಈಗ ಏಕೆ 'ಇಲ್ಲ' ಎಂದು ಹೇಳಿದೆ ಎಂದು ವಿವರಿಸುತ್ತೇನೆ.

ನಾವು ಈ ಸಂದರ್ಭದಲ್ಲಿ ನಾಗರಿಕತೆಯೆಂಬ ರೋಗದಿಂದ ಎಷ್ಟು ಪೀಡಿತರಾಗಿದ್ದೇವೆ ಎಂದರೆ ಇಂಗ್ಲೀಷ್ ಶಿಕ್ಷಣವನ್ನು ಸಂಪೂರ್ಣವಾಗಿ ಕಡೆಗಣಿಸುವ ಪರಿಸ್ಥಿತಿಯಲ್ಲಿ ನಾವಿಲ್ಲ. ಇದನ್ನು ಈಗಾಗಲೇ ಗಳಿಸಿರುವವರು ಅದರ ಉಪಯೋಗವನ್ನು ಅಗತ್ಯವಿರುವಲ್ಲಿ ಪಡೆದುಕೊಳ್ಳಲಿ. ಇಂಗ್ಲೀಷ್ ಜನರೊಡನೆ ವ್ಯವಹರಿಸುವಾಗ, ನಮ್ಮವರೊಂದಿಗೇ ವ್ಯವಹರಿಸುವಾಗ ಇಂಗ್ಲೀಷ್ ಭಾಷೆಯಲ್ಲಿ ಅನಿವಾರ್ಯವಾಗಿ ಸಂವಹನ ಮಾಡಬೇಕಿದ್ದಾಗ, ಅವರುಗಳಿಗೆ ಅವರ ನಾಗರಿಕತೆಯ ಬಗ್ಗೆ ಯಾವ ಪ್ರಮಾಣದ ಹೇಸಿಗೆ ಇದೆಯೆಂದು ತಿಳಿಯುವ ಸಂದರ್ಭ ನಮಗೆ ಒದಗಿ ಬಂದಾಗ ನಮಗೆ ಗೊತ್ತಿದ್ದರೆ ಇಂಗ್ಲೀಷನ್ನು ಬಳಸುವುದು ಇಲ್ಲವೇ ಅಗತ್ಯ ಬಿದ್ದರೆ ಕಲಿಯಬಹುದು. ಇಂಗ್ಲೀಷ್ ಕಲಿತವರು ತಮ್ಮ ಮಕ್ಕಳಿಗೆ ನೈತಿಕತೆಯನ್ನು ತಮ್ಮ ತಮ್ಮ ಮಾತೃಭಾಷೆಯ ಮೂಲಕವೇ ಕಲಿಸಬೇಕು ಹಾಗೂ ಮತ್ತೊಂದು ಭಾರತೀಯ ಭಾಷೆಯನ್ನು ಕಲಿಸಬೇಕು. ಆ ಮಕ್ಕಳು ಬೆಳೆದು ದೊಡ್ಡವರಾದಾಗ ಇಂಗ್ಲೀಷ್ ಕಲಿಯಬಹುದು. ದೂರಗಾಮಿ ಗುರಿಯೆಂದರೆ ಅದು ನಮಗೆ ಅನಗತ್ಯವಾಗಬೇಕು. ಹಣ ಗಳಿಸುವ ಉದ್ದೇಶ ಕೊನೆಗೊಮ್ಮೆ ಅದನ್ನು ತೊರೆಯಬೇಕೆನ್ನುವುದೇ ಆಗಿರಬೇಕು. ಹಾಗೆಯೇ ಸೀಮಿತ ಪ್ರಮಾಣದಲ್ಲಿ ಇಂಗ್ಲೀಷನ್ನು ಕಲಿಯುವಾಗ ಅದರ ಮೂಲಕ ಏನನ್ನು ಕಲಿಯಲು ಬಯಸಿದ್ದೇವೆ, ಯಾವುದನ್ನು ಬಯಸಿಲ್ಲ ಎಂದು ಚಿಂತಿಸಬೇಕು. ನಾವು ವಿಜ್ಞಾನದಲ್ಲಿ ಯಾವ ಭಾಗಗಳನ್ನು ಕಲಿಯಬೇಕು ಎಂದು ತಿಳಿಯುವುದು ಅವಶ್ಯ. ಸ್ವಲ್ಪ ಆಲೋಚಿಸಿ. ನಾವು ಇಂಗ್ಲೀಷ್ ಪದವಿಗಳನ್ನು ಕಡೆಗಣಿಸಲು ಪ್ರಾರಂಭಿಸಿದ ಮರುಕ್ಷಣವೇ ನಮ್ಮನ್ನು ಆಳುವವರು ತಲೆಕೆಡಿಸಿಕೊಳ್ಳುತ್ತಾರೆ.

ಓದುಗ : ಹಾಗಾದರೆ ನಾವು ಯಾವ ಶಿಕ್ಷಣವನ್ನು ಪಡೆದುಕೊಳ್ಳಬೇಕು?
ಸಂಪಾದಕ: ಇದನ್ನು ನಾವು ಈಗಾಗಲೇ ಚರ್ಚಿಸಿದ್ದೇವಾದರೂ ಅದನ್ನು ಇನ್ನಷ್ಟು ವಿವರವಾಗಿ ತಿಳಿಯೋಣ. ನಾವು ನಮ್ಮ ಎಲ್ಲ ಭಾಷೆಗಳನ್ನೂ ಸುಧಾರಣೆ ಮಾಡಬೇಕಿದೆ. ಆ ಭಾಷೆಗಳ ಮೂಲಕ ಯಾವ ವಿಷಯಗಳನ್ನು ಕಲಿಯಬೇಕೆನ್ನುವುದರ ಬಗ್ಗೆ ಇಲ್ಲಿ

ವಿವರಿಸುವ ಅಗತ್ಯವಿಲ್ಲ. ಮೌಲಿಕ ಇಂಗ್ಲೀಷ್ ಪುಸ್ತಕಗಳನ್ನು ವಿವಿಧ ಭಾರತೀಯ ಭಾಷೆಗಳಿಗೆ ಅನುವಾದಿಸಬೇಕು. ವಿಜ್ಞಾನದ ಅನೇಕ ಶಾಖೆಗಳನ್ನು ಕಲಿಯುವ ಸೋಗನ್ನು ಇನ್ನಾದರೂ ಕೈಬಿಡಬೇಕು. ಧಾರ್ಮಿಕ, ಅಂದರೆ ನೈತಿಕ ಶಿಕ್ಷಣಕ್ಕೇ ಮೊದಲ ಆದ್ಯತೆ ಕೊಡಬೇಕು. ಎಲ್ಲ ಸಂಸ್ಕಾರವಂತ ಭಾರತೀಯನೂ ತನ್ನ ಪ್ರಾದೇಶಿಕ ಭಾಷೆಯ ಜೊತೆ ಇನ್ನೊಂದು ಭಾಷೆ ತಿಳಿದಿರಬೇಕು. ಹಿಂದುವಾದರೆ ಸಂಸ್ಕೃತ ; ಮುಸ್ಲಿಂ ಆದರೆ ಅರೇಬಿಕ್; ಪಾರಸಿಯಾದರೆ ಪರ್ಸಿಯನ್; ಕೆಲವು ಹಿಂದುಗಳು ಅರೇಬಿಕ್ ಮತ್ತು ಪರ್ಸಿಯನ್ ಅನ್ನು ತಿಳಿದಿರಬೇಕು; ಕೆಲವು ಮುಸ್ಲಿಮರು ಮತ್ತು ಪಾರ್ಸಿಗಳು ಸಂಸ್ಕೃತ ತಿಳಿದಿರಬೇಕು. ಅನೇಕ ಉತ್ತರ ಮತ್ತು ಪಶ್ಚಿಮ ಭಾರತೀಯರು ತಮಿಳನ್ನು ಕಲಿಯಬೇಕು. ಭಾರತಕ್ಕೆ ಸಾರ್ವತ್ರಿಕ ಭಾಷೆ ಹಿಂದಿಯಾಗಿರಬೇಕು ಹಾಗೂ ಅದನ್ನು ನಾಗರಿ ಮತ್ತು ಪರ್ಸಿಯನ್ ಲಿಪಿಯಲ್ಲಿ ಬರೆಯುವ ಆಯ್ಕೆ ಇರಬೇಕು. ಹಿಂದು ಮತ್ತು ಮುಸ್ಲಿಮರು ಉತ್ತಮ ಬಾಂಧವ್ಯವನ್ನು ಹೊಂದಿರಬೇಕೆಂದರೆ ಎರಡೂ ಲಿಪಿ ಪ್ರಭೇದಗಳಿರಬೇಕು. ಇಷ್ಟನ್ನು ಮಾಡಲು ಸಾಧ್ಯವಾದರೆ, ಅತಿ ಕಡಿಮೆ ಸಮಯದಲ್ಲಿ ನಾವು ಇಂಗ್ಲೀಷನ್ನು ಇಲ್ಲಿಂದ ಓಡಿಸಿಬಿಡಬಹುದು. ಗುಲಾಮರಾದ ನಮಗೆ ಇವೆಲ್ಲ ಅತ್ಯಗತ್ಯ. ನಮ್ಮ ಗುಲಾಮಿತನದಿಂದಾಗಿ, ರಾಷ್ಟ್ರವೇ ಗುಲಾಮಿಗಿರಿಗೆ ಒಳಪಟ್ಟಿದೆ ಹಾಗೂ ನಮ್ಮ ಬಿಡುತೆಯ ಮೂಲಕ ಅದು ಸಂಕೋಲೆಯಿಂದ ಕಳಚಿಕೊಳ್ಳುತ್ತದೆ.

ಓದುಗ: ಧಾರ್ಮಿಕ ಶಿಕ್ಷಣದ ಪ್ರಶ್ನೆಯು ತುಂಬ ಕಠಿಣವಾದದ್ದು.

ಸಂಪಾದಕ: ಹಾಗೆಂದು ನಾವು ಅದನ್ನು ಬಿಟ್ಟಿರಲು ಸಾಧ್ಯವಿಲ್ಲ. ಭಾರತ ದೇಶವು ದೇವರಿಲ್ಲದ ನಾಡು ಆಗಲು ಎಂದೆಂದಿಗೂ ಸಾಧ್ಯವಿಲ್ಲ. ಈ ನೆಲದಲ್ಲಿ ನಾಸ್ತಿಕವಾದವು ಅರಳುವ ಸಾಧ್ಯತೆಯೇ ಇಲ್ಲ. ಅದು ಅತ್ಯಂತ ಕಷ್ಟಕರವಾದದ್ದು. ಧಾರ್ಮಿಕ ಶಿಕ್ಷಣದ ಬಗ್ಗೆ ಯೋಚಿಸಲು ಅನುವಾಗುತ್ತಿದ್ದಂತೆಯೇ ನನ್ನ ತಲೆ ತಿರುಗಲು ಪ್ರಾರಂಭಿಸುತ್ತದೆ. ಮುಲ್ಲಾಗಳು, ದಸ್ತೂರ್ ಗಳು ಮತ್ತು ಬ್ರಾಹ್ಮಣರ ಕೈಯಲ್ಲಿ ಇದರ ಬೀಗದ ಕೈ ಇದೆ. ಆದರೆ ಅವರಲ್ಲಿ ವಿವೇಕ ಮೂಡದಿದ್ದರೆ ನಾವು ಇಂಗ್ಲೀಷ್ ಶಿಕ್ಷಣದಿಂದ ಪಡೆದ ಶಕ್ತಿಯನ್ನು ಧಾರ್ಮಿಕ ಶಿಕ್ಷಣಕ್ಕೆ ವಿನಿಯೋಗಿಸಬೇಕು. ಇದೇನೂ ಅಂಥ ಕಷ್ಟಕರ ಅನಿಸುವುದಿಲ್ಲ. ವಿಶಾಲ ಸಾಗರದ ಅಂಚುಗಳು ಮಾತ್ರವೇ ಕಲುಷಿತಗೊಂಡಿದ್ದು ಅಲ್ಲಿರುವವರಿಗೆ ಮಾತ್ರ ಶುದ್ಧೀಕರಣದ ಅಗತ್ಯವಿದೆ. ಅದರಲ್ಲಿರುವ ನಮ್ಮ ನಿಮ್ಮಂಥವರು ಸ್ವಯಂ–ಶುದ್ಧೀಕರಣವನ್ನು ಮಾಡಿಕೊಳ್ಳಬಹುದು. ಲಕ್ಷಾಂತರ ಮಂದಿಗೆ ನನ್ನ ಟೀಕೆಗಳು ಅನ್ವಯವಾಗುವುದೇ ಇಲ್ಲ. ಭಾರತವನ್ನು ಅದರ ಶುದ್ಧರೂಪಕ್ಕೆ ಮರಳಿ ತರಲು ಇದು ತೀರಾ ಅಗತ್ಯ.

ಹಿಂದ್ ಸ್ವರಾಜ್ ಅಧ್ಯಾಯ 18

# 2

# ವೃತ್ತಿಯ ಮೂಲಕ ಶಿಕ್ಷಣ

ಹೊಸ ಶಿಕ್ಷಣ ಪದ್ಧತಿಯು ತಮ್ಮ ಮನದಾಳದಲ್ಲಿ ಹುಟ್ಟಿ ಬೆಳೆದ ಬಗೆಯನ್ನು ಹಾಗೂ ವೃತ್ತಿ ಮತ್ತು ಶಿಕ್ಷಣ ಇವೆರಡೂ ಸಮ್ಮಿಲನಗೊಂಡ ಅವರ ಪರಿಕಲ್ಪನೆಯ ಸ್ವರೂಪವನ್ನು ಗಾಂಧೀಜಿಯವರು ತಮ್ಮ ಅನೇಕ ಭಾಷಣಗಳಲ್ಲಿ ವಿವರವಾಗಿ ಚರ್ಚಿಸಿದ್ದಾರೆ. " ಪ್ರಸ್ತುತ ಪದ್ಧತಿಯಿಂದ ದೂರ ಹೊರಳಬೇಕೆನ್ನುವ ಅಗತ್ಯವನ್ನು ನಾನು ಬಹಳ ಹಿಂದೆಯೇ ಮನಗಂಡಿದ್ದೆ" ಎಂದು ಅವರು ಹೇಳಿದ್ದಾರೆ. "ನಾನು ದಕ್ಷಿಣ ಆಫ್ರಿಕಾದಿಂದ ಮರಳಿ ಬಂದ ನಂತರ ನನ್ನನ್ನು ಭೇಟಿಯಾಗಲು ಬಂದಿದ್ದ

ವಿದ್ಯಾರ್ಥಿಗಳ ಮೂಲಕ ನನಗೆ ಆಧುನಿಕ ಶಿಕ್ಷಣದ ಸೋಲು ತಿಳಿದಿತ್ತು. ಹಾಗಾಗಿ ನಾನು ಆಶ್ರಮ ಶಾಲೆಯಲ್ಲಿ  ಕರಕುಶಲ ತರಬೇತಿಯನ್ನು ಪ್ರಾರಂಭಿಸಿದೆ. ನಿಜಕ್ಕೂ ದೈಹಿಕ ತರಬೇತಿಗೆ ವಿಶೇಷ ಒತ್ತನ್ನು ನೀಡಿದೆ. ಎಷ್ಟೆಂದರೆ, ಮಕ್ಕಳಿಗೆ ಅಂಥ ತರಬೇತಿಗಳು ಅತಿಯೆನ್ನಿಸಲು ಪ್ರಾರಂಭವಾಯಿತು ಮತ್ತು ಅಕ್ಷರ ಶಿಕ್ಷಣದಿಂದ ತಾವು ವಂಚಿತರಾಗುತ್ತಿದ್ದೇವೆ ಎನ್ನುವ ಭಾವನೆ ಅವರಲ್ಲಿ ಮೂಡಿತು. ಆದರೆ ಅವರ ಭಾವನೆ ತಪ್ಪಾಗಿದ್ದಿತು. ಏಕೆಂದರೆ ಅವರು ಕಡಿಮೆ ಎಂದು ಭಾವಿಸಿದ್ದು ರೂಢಿಗತ ಶಾಲೆಗಳಲ್ಲಿ ವಿದ್ಯಾರ್ಥಿಗಳು ಸಾಮಾನ್ಯವಾಗಿ ಕಲಿಯುತ್ತಿರುವುದಕ್ಕಿಂತ ತುಸು ಹೆಚ್ಚೇ ಇದ್ದಿತು.  ಆಗ ನಾನು ಆಲೋಚಿಸಲು ಪ್ರಾರಂಭಿಸಿದೆ. ವೃತ್ತಿ ಸಂಬಂಧಿತ ತರಬೇತಿಯ ಜೊತೆಗೆ ಅಕ್ಷರ ಕಲಿಕೆಯಲ್ಲ, ಬದಲಾಗಿ ವೃತ್ತಿಸಂಬಂಧಿತ ತರಬೇತಿಯ ಮೂಲಕ ಅಕ್ಷರ ಕಲಿಕೆ ಎನ್ನುವುದೇ ಸರಿಯಾದದ್ದು. ಹಾಗಾದಾಗ ವೃತ್ತಿ ಸಂಬಂಧಿತ ತರಬೇತಿಯು ಠೌಡು ಕುಟ್ಟುವಂತಹ ನೀರಸ, ಬೇಸರದ ಕಾರ್ಯವಾಗಿರದೆ ಅಕ್ಷರ ಶಿಕ್ಷಣವು ಹೊಸ ವಿಷಯ ವಸ್ತು ಹಾಗೂ ಹೊಸ ಉಪಯುಕ್ತತೆಯಿಂದ ಕೂಡಿರುತ್ತದೆ."

"ಇಂಗ್ಲೀಷನ್ನು ನಿಷೇಧಿಸಲು ನಾವು ನಿರ್ಧರಿಸಿದೆವು. ಏಕೆಂದರೆ, ಮಕ್ಕಳ  ಸಮಯದ ಬಹುಭಾಗವು ಇಂಗ್ಲೀಷ್ ಶಬ್ದಗಳು ಮತ್ತು ನುಡಿಗಟ್ಟುಗಳನ್ನು ಉರು ಹೊಡೆಯುವುದರಲ್ಲೇ ವ್ಯಯವಾಗುತ್ತಿತ್ತು. ಇದಾದ ನಂತರವೂ ಆ ಮಕ್ಕಳು ತಾವು ಕಲಿತದ್ದನ್ನು ತಮ್ಮದೇ ಮಾತುಗಳಲ್ಲಿ ಹೇಳಲು ಬರುತ್ತಿರಲಿಲ್ಲ ಮತ್ತು ಉಪಾಧ್ಯಾಯರು ಕಲಿಸಿದ್ದನ್ನು ಸರಿಯಾಗಿ ಗ್ರಹಿಸಲು ಅವರಿಗೆ ಆಗುತ್ತಿರಲಿಲ್ಲ. ಮತ್ತೊಂದೆಡೆ,  ಔದಾಸೀನ್ಯದಿಂದಾಗಿ ಅವರು  ತಮ್ಮ  ಭಾಷೆಯನ್ನೇ ಮರೆತಿದ್ದರು.  ವೃತ್ತಿಪರ ತರಬೇತಿಯ ಮುಖಾಂತರದ ಅಕ್ಷರ ಶಿಕ್ಷಣವು ಇವೆರಡೂ ರೋಗಗಳಿಗೆ ಮದ್ದು ಎಂದು ಆಗ ತೋರಿತ್ತು. "

" ಈ ಹುಡುಗರ ಜೊತೆ ಮೊದಲ ದಿನ ನಾನು ಅವರ ಗುಣಮಟ್ಟವನ್ನು  ಅರಿತುಕೊಳ್ಳುವ ಪ್ರಯತ್ನ ಮಾಡಬೇಕಿತ್ತು. ಅವರಿಗೆ ಓದಲು ಬರೆಯಲು ಬರುತ್ತದೆಯೋ ಇಲ್ಲವೋ, ಭೂಗೋಳ ಶಾಸ್ತ್ರದ ಜ್ಞಾನ ಇದೆಯೋ ಇಲ್ಲವೋ ಇದೆಲ್ಲವನ್ನೂ ತಿಳಿದು, ನಂತರ ಅವರ ಸಾಧನಗಳ ಪಟ್ಟಿಗೆ ತಕಲಿಯಲ್ಲೂ ಸೇರಿಸುವುದು ನನ್ನ ಉದ್ದೇಶವಾಗಿತ್ತು."

"ಲಭ್ಯವಿದ್ದ ಅನೇಕ ಕರಕುಶಲ ಸಾಧನಗಳಲ್ಲಿ ನಾನು ತಕಲಿಯನ್ನೇ ಏಕೆ ಆರಿಸಿಕೊಂಡೆ ಎಂದು ನೀವು ನನ್ನನ್ನು ಕೇಳಬಹುದು. ಕಾರಣವೇನೆಂದರೆ ತಕಲಿಯು ನಾವು ಆವಿಷ್ಕರಿಸಿದ ಮೊದಲ ಕರಕುಶಲ ಸಾಧನಗಳಲ್ಲಿ ಒಂದು. ಅದು ತಲೆತಲಾಂತರದಿಂದಲೂ ಉಳಿದುಕೊಂಡು ಬಂದಿದೆ. ಹಿಂದಿನ ಕಾಲದಲ್ಲಿ ನಮ್ಮ ಎಲ್ಲ ಬಟ್ಟೆಗಳನ್ನೂ ತಕಲಿಯ ನೂಲಿನಿಂದಲೇ ಮಾಡಲಾಗುತ್ತಿತ್ತು.  ನೂಲುವ ಚಕ್ರ ಬಂದದ್ದು ನಂತರದಲ್ಲಿ. ಆದರೆ ಅತ್ಯಂತ ತೆಳುವಾದ ಕೌಂಟಿನ ನೂಲು ಚಕ್ರದಲ್ಲಿ ತಯಾರಾಗಲಿಲ್ಲ ಎನ್ನುವ ಕಾರಣದಿಂದಾಗಿ ತಕಲಿಗೆ ಮರಳಬೇಕಾಯಿತು.  ತಕಲಿಯನ್ನು ವಿನ್ಯಾಸಗೊಳಿಸಿ ಸಿದ್ಧಪಡಿಸುವಲ್ಲಿ ಮಾನವನ ಆತ್ಯಂತಿಕ ಪ್ರತಿಭೆ ಹಿಂದೆಂದೂ ಕಾಣಿಸದ ಪ್ರಮಾಣದಲ್ಲಿ ಅನಾವರಣಗೊಂಡಿತು. ಇಂದು ನಾವು ಅದನ್ನು ಅದರ ಎಲ್ಲ ವೈಭವವನ್ನು ಪುನಶ್ಚೇತನಗೊಳಿಸಬೇಕೆಂದರೆ ಮಕ್ಕಳ ಶಿಕ್ಷಣವನ್ನು ತಕಲಿಯಿಂದ ಪ್ರಾರಂಭಿಸಬೇಕಾಗಿದೆ. ಹಾಗಾಗಿ ನನ್ನ ಮುಂದಿನ ಪಾಠದಲ್ಲಿ ತಕಲಿಯು ನಮ್ಮ ದೈನಂದಿನ ಬದುಕಿನಲ್ಲಿ ಯಾವ ಸ್ಥಾನವನ್ನು ಹೊಂದಿತ್ತು ಎಂದು ತಿಳಿಸಬೇಕಾಗಿದೆ. ನಂತರ ಅವರಿಗೆ ಸ್ವಲ್ಪ ಐತಿಹಾಸಿಕ ಹಿನ್ನೆಲೆಯನ್ನು ಹೇಳಿ ತಕಲಿಯು ಹೇಗೆ ಅವನತಿಯನ್ನು ಹೊಂದಿತು ಎಂದು ವಿವರಿಸುತ್ತೇನೆ. ಅದಾದ ನಂತರ ಈಸ್ಟ್ ಇಂಡಿಯಾ ಕಂಪನಿಯ ಆರಂಭದ ಬಗ್ಗೆ ಅಥವಾ ಇನ್ನೂ ಸ್ವಲ್ಪ ಹಿಂದೆ ಸಾಗಿ ಮುಘಲ್ ಯುಗದ ಬಗ್ಗೆ

ತಿಳಿಸಿ ಭಾರತೀಯ ಇತಿಹಾಸದ ಕುರಿತಾಗಿ ಹೇಳುವುದು. ಈ ಸಂದರ್ಭದಲ್ಲಿಯೇ ಈಸ್ಟ್ ಇಂಡಿಯಾ ಕಂಪನಿ ಮಾಡಿದ ಶೋಷಣೆಯ ಕುರಿತಾಗಿಯೂ ಹೇಳಬೇಕು. ಹೇಗೆ ನಮ್ಮ ಕುಶಲಕಲೆಯ ಕತ್ತನ್ನು ಹಿಸುಕಲಾಯಿತು ಹಾಗೂ ಅದು ಕೊನೆಯುಸಿರೆಳೆಯುವಂತೆ ಮಾಡಲಾಯಿತು ಎಂದು  ತಿಳಿಸಬೇಕು. ನಂತರ ತಕಲಿಯ ಯಾಂತ್ರಿಕ ತತ್ವಗಳ ಕುರಿತಾಗಿ ಹಾಗೂ ಅದನ್ನು ರಚಿಸುವ ಬಗ್ಗೆಯೂ ಹೇಳಬೇಕು. ಅದು ಮೊದಲಿಗೆ ಒಂದು ಚಿಕ್ಕ ಮಣ್ಣಿನ ಅಥವಾ ಬಹುಶಃ ಒಣಗಿಸಿದ ಹಿಟ್ಟಿನ ಮುದ್ದೆ ಇದ್ದಿರಬೇಕು. ಅದರ ಮಧ್ಯದಲ್ಲಿ ಬಿದಿರಿನ ಕಡ್ಡಿಯನ್ನು ಸಿಕ್ಕಿಸಿದ್ದರೆಂದು ತೋರುತ್ತದೆ. ಬಂಗಾಳ ಮತ್ತು ಬಿಹಾರದ ಕೆಲ ಭಾಗಗಳಲ್ಲಿ ಇದನ್ನು ಇಂದಿಗೂ ನೋಡಬಹುದಾಗಿದೆ. ನಂತರದ ದಿನಗಳಲ್ಲಿ ಮಣ್ಣಿನ ಉಂಡೆಯ ಜಾಗದಲ್ಲಿ ಇಟ್ಟಿಗೆಯ ಬಿಲ್ಲೆ ಬಂದಿತು. ನಮ್ಮ ಕಾಲಕ್ಕೆ ಇಟ್ಟಿಗೆಯ ಬಿಲ್ಲೆಯ ಜಾಗದಲ್ಲಿ ಕಬ್ಬಿಣದ, ಉಕ್ಕಿನ ಇಲ್ಲವೇ ಹಿತ್ತಾಳೆಯ ಬಿಲ್ಲೆ ಮತ್ತು ಬಿದಿರಿನ ಕಡ್ಡಿಯ ಬದಲಾಗಿ ಉಕ್ಕಿನ ತಂತಿಯು ಬಂದಿತು. ಇಲ್ಲಿಯೂ ಸಹ ಬಿಲ್ಲೆಯ ಮತ್ತು ತಂತಿಯ ಅಳತೆಯ ಬಗ್ಗೆ, ಅದೇಕೆ ನಿರ್ದಿಷ್ಟ ಅಳತೆಯದು – ಹೆಚ್ಚೂ ಅಲ್ಲ, ಕಡಿಮೆಯೂ ಅಲ್ಲ – ಎನ್ನುವ ಸಂಗತಿಗಳ ಕುರಿತಾಗಿ ಬೇಕಷ್ಟು ವಿವರಗಳನ್ನು ನೀಡುತ್ತಾ ಹೋಗಬಹುದು. ಇದಾದ ನಂತರ ಹತ್ತಿಯ ಬಗ್ಗೆ ಕೆಲವು ಉಪನ್ಯಾಸಗಳನ್ನು ಸೇರಿಸಬಹುದು; ಅದು ಬೆಳೆಯುವ ಪ್ರದೇಶ, ಅದರ ವಿವಿಧ ತಳಿಗಳು, ಪ್ರಸಕ್ತ ಅದನ್ನು ನಮ್ಮ ದೇಶದಲ್ಲಿ ಬೆಳೆಯುತ್ತಿರುವ ಪ್ರದೇಶಗಳು, ಜೊತೆಗೆ ಅದರ ಕೃಷಿಗೆ ಸಂಬಂಧಿಸಿದ ಒಂದಷ್ಟು ವಿವರಗಳು, ಅದಕ್ಕೆ ಪ್ರಶಸ್ತವಾದ ಮಣ್ಣಿನ ಗುಣಗಳು ಇತ್ಯಾದಿ. ಇದು ಕೃಷಿಯ ಅಧ್ಯಯನಕ್ಕೆ ದಾರಿ ಮಾಡಿಕೊಡಬಹುದು.

ಇದನ್ನು ವಿದ್ಯಾರ್ಥಿಗಳಿಗೆ ಕಲಿಸಲು ಹೊರಡುವ ಮೊದಲು ಶಿಕ್ಷಕರು ಸ್ವತಃ ಒಂದಷ್ಟು ಜ್ಞಾನಭಂಡಾರವನ್ನು ಗಳಿಸಿಕೊಂಡೇ ಪ್ರಾರಂಭಿಸಬೇಕೆನ್ನುವುದನ್ನು ಬಹುಶಃ ನೀವಾಗಲೇ ಗ್ರಹಿಸಿರಬೇಕು. ಪ್ರಾಥಮಿಕ ಅಂಕಗಣಿತದಲ್ಲಿ ಕಲಿಸುವ ಎಲ್ಲವನ್ನೂ ನೂಲು ತೆಗೆಯುವ ಪ್ರಕ್ರಿಯೆಯಿಂದಲೇ ಕಲಿಸಬಹುದು. ನೂಲಿನ ಉದ್ದ (ಗಜಗಳಲ್ಲಿ), ಉಂಡೆಗಳನ್ನು ಮಾಡುವುದು, ನೇಕಾರರಿಗೆ ಕೊಡಲು ಬಂಡಲುಗಳನ್ನು ತಯಾರಿಸುವುದು, ನಿರ್ದಿಷ್ಟ ಬಟ್ಟೆಗಳಿಗೆ ಬೇಕಿರುವ ಹಾಸು–ಹೊಕ್ಕುಗಳ ಲೆಕ್ಕಾಚಾರ ಇತ್ಯಾದಿ. ಹತ್ತಿಯನ್ನು ಬೆಳೆಯುವ ಹಂತದಿಂದ ಅದನ್ನು ಅಂತಿಮವಾಗಿ ಬಟ್ಟೆಯ ರೂಪಕ್ಕೆ ತಂದು ಮಾರಾಟ ಮಾಡುವ ಹಂತದವರೆಗೆ – ಹತ್ತಿಯನ್ನು ಹಸನುಗೊಳಿಸುವುದು, ಹಿಂಜುವುದು, ವಿಂಗಡಿಸುವುದು, ನೂಲುವುದು – ಇವೆಲ್ಲದರಲ್ಲೂ ಯಂತ್ರವಿಜ್ಞಾನ, ಇತಿಹಾಸ ಮತ್ತು ಗಣಿತ ಇದೆ.

"ದೇಹ, ಮನಸ್ಸು ಮತ್ತು ಆತ್ಮದ ಸಮಗ್ರಶಿಕ್ಷಣವನ್ನು ಮಕ್ಕಳಿಗೆ ಕೊಡುವಕುಶಲಕಲೆಗಳ ಮೂಲಕ ನೀಡಬೇಕೆನ್ನುವುದುಇದರಲ್ಲಿ ಬಹುಮುಖ್ಯ ಸಂಗತಿಯಾಗಿದೆ. ಕುಶಲಕಲೆಗಳ ಎಲ್ಲ ಪ್ರಕ್ರಿಯೆಗಳ ಬೋಧನೆಯ ಮೂಲಕ ಮಗುವಿನ ಆಂತರಿಕ ಸಾಮರ್ಥ್ಯವನ್ನು ಹೊರತೆಗೆಯಬೇಕಿದೆ ಮತ್ತು ಇತಿಹಾಸ, ಭೂಗೋಳ ಮತ್ತು ಅಂಕಗಣಿತದ ಎಲ್ಲ ಪಾಠಗಳೂ ಸಹ ಕರಕುಶಲಕ್ಕೆ ಸಂಬಂಧಿಸಿರುತ್ತವೆ."

ಹರಿಜನ್ , 11–6–38

3

# ಬೌದ್ಧಿಕ ವಿಕಾಸವೋ, ಇಲ್ಲ ಚಂಚಲತೆಯೋ?

ತಿರುವಾಂಕೂರು ಮತ್ತು ಮದ್ರಾಸ್ ಪ್ರಾಂತ್ಯಗಳಲ್ಲಿ ನನ್ನ ಇತ್ತೀಚಿನ ತಿರುಗಾಟದಲ್ಲಿ ನನ್ನ ಸಂಪರ್ಕಕ್ಕೆ ಬಂದ ಹೆಚ್ಚಿನ ವಿದ್ಯಾರ್ಥಿಗಳು ಮತ್ತು 'ಬುದ್ಧಿಜೀವಿಗಳು' ಬೌದ್ಧಿಕ ವಿಕಾಸಕ್ಕಿಂತ ಹೆಚ್ಚಾಗಿ ಬೌದ್ಧಿಕ ಚಂಚಲತೆಯ ಉದಾಹರಣೆಗಳಾಗಿ ತೋರಿದರು. ಇದರ ಮೂಲ ದೋಷವಿರುವುದು ಕುತ್ಸಿತ ಮನೋಧರ್ಮವನ್ನು ಬೆಳೆಸುವ, ಮನಸ್ಸಿನ ದಿಕ್ಕು ತಪ್ಪಿಸುವ ಮತ್ತು ತನ್ಮೂಲಕ ವ್ಯಕ್ತಿತ್ವವನ್ನು ಅರಳಿಸುವ ಬದಲಾಗಿ ಕುಗ್ಗಿಸುವುದನ್ನು ಉತ್ತೇಜಿಸುವ ಆಧುನಿಕ ಶಿಕ್ಷಣ ಪದ್ಧತಿಯಲ್ಲಿ. ಸೇವಾಗ್ರಾಮದಲ್ಲಿ ನಾನು ಮಾಡಿದ ಪ್ರಯೋಗಗಳು ನನ್ನ ಈ ಅನಿಸಿಕೆಯನ್ನು ಮತ್ತಷ್ಟು ಗಟ್ಟಿಗೊಳಿಸಿದವು. ಆದರೆ ಆ ಪ್ರಯೋಗಗಳು ಇನ್ನೂ ಅಸಂಪೂರ್ಣವಾಗಿರುವುದರಿಂದ ಅವನ್ನು ಇಲ್ಲಿ ಪುರಾವೆಗಳನ್ನಾಗಿ ಕೊಡುವುದು ಅಷ್ಟು ಸೂಕ್ತವಲ್ಲ. ಶಿಕ್ಷಣದ ಕುರಿತಾಗಿ ನಾನೀಗ ಹೇಳಲು ಹೊರಟಿರುವ ನಿಲುಮೆಗಳು ನಾನು 1904 ರಲ್ಲಿ ದಕ್ಷಿಣ ಆಫ್ರಿಕಾದ ಫೀನಿಕ್ಸ್‌ನಲ್ಲಿ ಆಶ್ರಮವನ್ನು ಪ್ರಾರಂಭಿಸಿದ ಕಾಲದಿಂದಲೂ ನನ್ನಲ್ಲಿ ದೃಢವಾಗಿ ಬೇರೂರಿವೆ.

ಬುದ್ಧಿಯ ನೈಜ ಶಿಕ್ಷಣವು ದೇಹದ ವಿವಿಧ ಅವಯವಗಳಾದ ಕೈ, ಕಾಲು, ಕಣ್ಣು, ಕಿವಿ,ಮೂಗು ಇತ್ಯಾದಿಗಳ ಉಚಿತ ವ್ಯಾಯಾಮ ಮತ್ತು ತರಬೇತಿಗಳ ಮೂಲಕವೇ ಆಗುತ್ತದೆ ಎನ್ನುವುದು ನನ್ನ ನಂಬಿಕೆ. ಇದನ್ನೇ ಬೇರೆ ರೀತಿಯಲ್ಲಿ ಹೇಳುವುದಾದರೆ, ದೇಹದ ಅಂಗಗಳ ಜಾಣತನದ ಬಳಕೆಯು ಬುದ್ಧಿಯ ಶೀಘ್ರ ಬೆಳವಣಿಗೆಗೆ ದಾರಿ ಮಾಡಿಕೊಡುತ್ತದೆ. ಆದರೆ ದೇಹ ಮತ್ತು ಮನಸ್ಸಿನ ಬೆಳವಣಿಗೆಗಳು ಜೊತೆಜೊತೆಗೇನಡೆದು ಆತ್ಮವನ್ನು ಎಚ್ಚರಗೊಳಿಸುವ ಕಾರ್ಯವೂ ನಡೆಯದಿದ್ದರೆ ಮೊದಲ ಬೆಳವಣಿಗೆಗಳು ಕೇವಲ ಏಕಮುಖಿಯಾಗುತ್ತವೆ. ಆಧ್ಯಾತ್ಮಿಕ ತರಬೇತಿಯೆಂದರೆ ಹೃದಯದ ಶಿಕ್ಷಣವೆನ್ನುವುದು ನನ್ನ ಅಭಿಪ್ರಾಯ. ಹಾಗಾಗಿ, ಮನಸ್ಸಿನ ಉಚಿತ ಮತ್ತು ಪರಿಪೂರ್ಣ ಬೆಳವಣಿಗೆಯು ಸಾಧ್ಯವಾಗುವುದು ಮಗುವಿನ ದೈಹಿಕ ಮತ್ತು ಆಧ್ಯಾತ್ಮಿಕ ಸಾಮರ್ಥ್ಯಗಳಬೆಳವಣಿಗೆಯೂ ಸಹ ಅದರ ಜೊತೆಜೊತೆಗೇ ಸಾಗಿದಾಗ ಮಾತ್ರ. ಅವು ಸೇರಿದಾಗಲೇ ಒಂದು ಅಖಂಡಪೂರ್ಣತೆ ಸಾಧ್ಯ.ಅದ್ದರಿಂದ, ಈ ಸಿದ್ಧಾಂತದ ಪ್ರಕಾರ ಅವುಗಳನ್ನು ಬಿಡಿಬಿಡಿಯಾಗಿ ವಿಕಸನಗೊಳಿಸಬಹುದೆಂದು ಅಥವಾ ಒಂದನ್ನು ಬಿಟ್ಟು ಇನ್ನೊಂದು ಅರಳಲು ಸಾಧ್ಯವೆಂದು ಭಾವಿಸುವುದು ಶುದ್ಧ ಭ್ರಮೆ.

ನಮ್ಮ ವ್ಯಕ್ತಿತ್ವದ ವಿವಿಧ ಆಯಾಮಗಳಾದ ದೇಹ, ಮನಸ್ಸು ಮತ್ತು ಆತ್ಮದ ನಡುವೆ ಸರಿಯಾದ ಹೊಂದಾಣಿಕೆ ಮತ್ತು ಸಾಂಗತ್ಯಗಳ ಕೊರತೆಯಿಂದಾಗಬಹುದಾದ ಹಾನಿಕರ ಪರಿಣಾಮಗಳು ಎಲ್ಲರಿಗೂ ತಿಳಿದಿರುವಂತಹವೇ ಆಗಿವೆ. ಅಂಥವರು ನಮ್ಮ ಸುತ್ತಮುತ್ತ ಎಲ್ಲೆಲ್ಲಿಯೂ ಇದ್ದಾರೆ; ಆದರೆ ನಮ್ಮ ಸದ್ಯದ ವಿಕೃತ ಮನೋಧರ್ಮದ ಕಾರಣದಿಂದಾಗಿ ನಾವು ಅವರನ್ನು ಗ್ರಹಿಸುವಲ್ಲಿ ಎಡವುತ್ತಿದ್ದೇವೆ. ನಮ್ಮ ಗ್ರಾಮೀಣ ಮಂದಿಯನ್ನೇ ತೆಗೆದುಕೊಳ್ಳಿ. ತಮ್ಮ ಬಾಲ್ಯದ ದಿನಗಳಿಂದಲೇ ಅವರು ತಮ್ಮ ಹೊಲಗಳಲ್ಲಿ ಅವರ ದನಗಳಂತೆಯೇ ಬೆಳಗಿನಿಂದ ರಾತ್ರಿಯವರೆಗೆ ಮೈಮುರಿದು ದುಡಿಯುತ್ತಾರೆ. ಅವರ ಇರುವಿಕೆಯು ಕೊನೆಯೇ ಇಲ್ಲದ ಕತ್ತೆಚಾಕರಿಯಾಗಿದ್ದು ಅದರಲ್ಲಿ ಅದರ ತೀವ್ರತೆಯನ್ನು ಕಡಿಮೆ ಮಾಡುವ ಬುದ್ಧಿವಂತಿಕೆಯಾಗಲೀ ಅಥವಾ ಬದುಕಿನ ಉನ್ನತ ಲಾಲಿತ್ಯವಾಗಲೀ ಕಾಣಿಸುವುದಿಲ್ಲ.ತಮ್ಮ ಮನಸ್ಸು ಮತ್ತು ಆತ್ಮವನ್ನು ವಿಕಸಿಸುವ ಎಲ್ಲ ಅವಕಾಶಗಳನ್ನೂ ಕಳೆದುಕೊಂಡ ಅವರು ಪಶುಗಳ ಮಟ್ಟಕ್ಕೆ ಇಳಿದಿದ್ದಾರೆ. ಬದುಕು ಎನ್ನುವುದು, ಅವರಿಗೆ ಹೇಗೋ ಸವೆಸಬೇಕಾಗಿರುವ ಒಂದು ಕಠಿಣತಮ ಹಾದಿ ಮಾತ್ರ. ಇನ್ನೊಂದೆಡೆನಿಜವಾಗಿ ನೋಡಿದರೆ, ನಮ್ಮ ನಗರಗಳ ಶಾಲೆ ಹಾಗೂ ಕಾಲೇಜುಗಳಲ್ಲಿ ಶಿಕ್ಷಣದ

ಹೆಸರಿನಲ್ಲಿ ನಡೆಯುತ್ತಿರುವುದು ಕೇವಲ ಬೌದ್ಧಿಕ ಚಂಚಲತೆಯಾಗಿದೆ. ಅಲ್ಲಿ ಬೌದ್ಧಿಕ ತರಬೇತಿಯು ಶ್ರಮದ ಅಥವಾ ದೈಹಿಕ ಕೆಲಸಕ್ಕೆ ಏನೇನೂ ಸಂಬಂಧವಿಲ್ಲದ್ದು ಎನ್ನುವಂತೆ ಕಾಣಲಾಗುತ್ತಿದೆ. ಆದರೆ ಆರೋಗ್ಯಕರ ದೇಹಕ್ಕಾಗಿ ದೈಹಿಕ ವ್ಯಾಯಾಮವು ಅನಿವಾರ್ಯ ಎನ್ನುವ ಒಂದೇ ಕಾರಣದಿಂದಾಗಿ ಅವರು ಒಂದು ಕೃತಕ ಮತ್ತು ನೀರಸ ಸ್ವರೂಪದ ದೈಹಿಕ ವ್ಯಾಯಾಮ ಮಾಡುತ್ತಿದ್ದಾರೆ. ಅದರ ಪರಿಣಾಮವು ದುರಂತಮಯವಾಗಿದೆ. ಹಾಗಿಲ್ಲದಿದ್ದರೆ, ಅದನ್ನು ಹಾಸ್ಯಾಸ್ಪದವಾಗಿದೆ ಎಂದಷ್ಟೇ ಹೇಳಿ ಕೈಬಿಡಬಹುದಿತ್ತು. ಈ ಪದ್ಧತಿಯ ಫಲಾನುಭವಿಯು,ದೈಹಿಕ ಸಹಿಷ್ಣುತೆಯ ವಿಚಾರದಲ್ಲಿ ಒಬ್ಬ ಸಾಮಾನ್ಯ ಕಾರ್ಮಿಕನ ಜೊತೆ ಸ್ಪರ್ಧಿಸಲಾರ. ಅತ್ಯಂತ ಚಿಕ್ಕ ದೈಹಿಕ ಪರಿಶ್ರಮದಿಂದಲೂ ಸಹ ಅವನಿಗೆ ತಲೆನೋವು ಬರುತ್ತದೆ. ಕೊಂಚ ಹೊತ್ತು ಬಿಸಿಲಿನಲ್ಲಿ ನಿಂತರೆ ಅವನಿಗೆ ತಲೆಸುತ್ತು ಬರುತ್ತದೆ. ಇದಕ್ಕಿಂತಲೂ ಮುಖ್ಯ ವಿಚಾರವೇನೆಂದರೆ ಇದೆಲ್ಲವೂ 'ಸಹಜ' ಎಂದೇ ಪರಿಗಣಿಸಲಾಗುತ್ತಿದೆ. ಹೃದಯದ ಸಂವೇದನೆಗಳ ಕುರಿತಾಗಿ ಹೇಳುವುದಾದರೆ, ಯಾವುದೇ ಅಂಕುಶವಿಲ್ಲದೆ, ಹುಚ್ಚುಹುಚ್ಚಾಗಿ ಬಿತ್ತುವ ಅಥವಾ ಹೇಗಾದರೂ ಬೆಳೆಯುತ್ತಾ ಹೋಗುವಂತೆ ಮಾಡಲಾಗಿದೆ. ಇದರ ಪರಿಣಾಮವೇ ನೈತಿಕ ಮತ್ತು ಆಧ್ಯಾತ್ಮಿಕ ಅರಾಜಕತೆ. ಆದರೆ ಇದನ್ನೇ ಹಾಡಿ ಹೊಗಳುವುದು ನಡೆದಿದೆ!!

ಇದಕ್ಕೆ ವ್ಯತಿರಿಕ್ತವಾಗಿ ಮೊದಲಿನಿಂದಲೇ ಹೃದಯದ ವಿಕಾಸಕ್ಕೆ ಒತ್ತು ನೀಡಿದ ಶಿಕ್ಷಣ ಪಡೆದ ಮಗುವನ್ನು ತೆಗೆದುಕೊಳ್ಳಿ. ಮಗುವು ಯಾವುದಾದರೊಂದು ಉಪಯುಕ್ತ ಕಸುಬಿನ ಮೂಲಕ ಕಲಿಯುವ ಪ್ರಕ್ರಿಯೆಯಲ್ಲಿದ್ದರೆ ಉದಾ: ನೂಲುವುದು, ಮರಗೆಲಸ, ವ್ಯವಸಾಯ ಇತ್ಯಾದಿ. ಹಾಗೂ ಅದಕ್ಕೆ ಸಂಬಂಧಿಸಿದಂತೆ ಅದರ ಎಲ್ಲ ಕಾರ್ಯಾಚರಣೆಗಳ ಸಮಗ್ರ ಸೈದ್ಧಾಂತಿಕ ಜ್ಞಾನ ಮತ್ತು ಅದಕ್ಕೆ ಅಗತ್ಯವಿರುವ ಸಲಕರಣೆಗಳ ನಿರ್ಮಾಣದಲ್ಲಿ ಕುಶಲತೆಯನ್ನು ಗಳಿಸಿದ್ದಾನೆಂದು ಭಾವಿಸೋಣ. ಅವನು ಆರೋಗ್ಯಕರ ದೇಹವನ್ನಷ್ಟೇ ಅಲ್ಲ, ಸ್ವಸ್ಥ ಮತ್ತು ಚುರುಕಾದ ಮನಸ್ಸನ್ನೂ ಬೆಳೆಸಿಕೊಂಡಿರುತ್ತಾನೆ. ಅದು ಕೇವಲ ಬೌದ್ಧಿಕ ಬೆಳವಣಿಗೆ ಮಾತ್ರವಾಗಿರದೆ ದಿನನಿತ್ಯದ ಅನುಭವಗಳಲ್ಲಿ ಮಿಂದ ಮತ್ತು ಬೇರುಬಿಟ್ಟಿರುವ ಅರಿವು ಆಗಿರುತ್ತದೆ. ಅವನ ಬೌದ್ಧಿಕ ಶಿಕ್ಷಣದಲ್ಲಿ ಅವನ ವೃತ್ತಿಯನ್ನು ಜಾಣತನದಿಂದ ಮತ್ತು ದಕ್ಷತೆಯಿಂದ ನಿರ್ವಹಿಸಲು ಅಗತ್ಯವಿರುವ ಗಣಿತ ಹಾಗೂ ಇನ್ನಿತರ ವಿಜ್ಞಾನಗಳ ಅರಿವೂ ಸೇರಿರುತ್ತದೆ.ಇದಕ್ಕೆ ಮನರಂಜನೆಯ ರೂಪದಲ್ಲಿ ಸಾಹಿತ್ಯವನ್ನು ಸೇರಿಸಿದರೆ ಆಗ ಅವನಿಗೆ ನಿರ್ದುಷ್ಟ, ಸಮತೋಲಿತ ಮತ್ತು ಪರಿಪೂರ್ಣ ಶಿಕ್ಷಣ ದೊರೆಯುತ್ತದೆ. ಅದರಲ್ಲಿ ಬುದ್ಧಿ, ದೇಹ ಮತ್ತು ಅಂತರಂಗದ ಚೇತನಗಳಿಗೆ ಸಂಪೂರ್ಣ ವ್ಯಾಯಾಮ ದೊರೆತು ಸಹಜ ಮತ್ತು ಸಾಮರಸ್ಯದ ಒಟ್ಟಾರೆ ವ್ಯಕ್ತಿತ್ವವು ರೂಪುಗೊಳ್ಳುತ್ತದೆ. ಮಾನವನು ಕೇವಲ ಬೌದ್ಧಿಕ ವ್ಯಕ್ತಿಯಲ್ಲ; ಕೇವಲ ಪ್ರಾಣಿಯಲ್ಲ; ಅಥವಾ ಹೃದಯ ಇಲ್ಲವೇ ಆತ್ಮ ಮಾತ್ರವಲ್ಲ. ಸಂಪೂರ್ಣ ವ್ಯಕ್ತಿತ್ವ ವಿಕಾಸಕ್ಕಾಗಿ ಇವು ಮೂರೂ ಸಂಗತಿಗಳ ಸರಿಯಾದ ಮತ್ತು ಸಂಗತ ಸಂಯೋಗವು ಅತ್ಯಗತ್ಯವಾಗಿದ್ದು ಇದು ಶಿಕ್ಷಣದ ನೈಜ ಆರ್ಥಿಕತೆಯನ್ನು ಪ್ರತಿನಿಧಿಸುತ್ತದೆ. ನಾವು ಸ್ವಾತಂತ್ರ್ಯವನ್ನು ಗಳಿಸಿದ ನಂತರವೇ ಈ ಬಗೆಯ ಶಿಕ್ಷಣವನ್ನು ನೀಡಲು ಸಾಧ್ಯವೆಂದು ವಾದಿಸುವುದು ನನ್ನ ಪ್ರಕಾರ ಇಂಗ್ಲೀಷಿನಲ್ಲಿ ಹೇಳುವಂತೆ "putting the cart before the horse" (ಗಾಡಿಯನ್ನು ಕುದುರೆಗೆ ಕಟ್ಟದೇ ಕುದುರೆಯ ಮುಂಭಾಗಕ್ಕೆ ಕಟ್ಟುವುದು). ಅವರವರ ವೃತ್ತಿಯನ್ನು ಕೇಂದ್ರಬಿಂದುವನ್ನಾಗಿಟ್ಟುಕೊಂಡು ಅವರು ಬದುಕುವುದು ಸಮಷ್ಟಿಯ ಹಿತಕ್ಕಾಗಿ ಎಂದು ಪ್ರಜ್ಞಾಪೂರ್ವಕವಾಗಿಕಲಿಸುವುದರ ವಿಧಾನದಿಂದ ಲಕ್ಷಾಂತರ ಭಾರತೀಯರಿಗೆ ಶಿಕ್ಷಣವನ್ನು ಕೊಡಲು ಸಾಧ್ಯವಾದರೆ ಸ್ವಾತಂತ್ರ್ಯದ ಗಳಿಕೆಯು ನಂಬಲಸಾಧ್ಯವಾದ ಕ್ಷಿಪ್ರಗತಿಯನ್ನು ಪಡೆದುಕೊಳ್ಳುತ್ತದೆ.

ಹರಿಜನ್ , 8–5–'37

4

## ರಾಷ್ಟ್ರೀಯ ಶಿಕ್ಷಣದ ತಿರುಳು

ಗುಜರಾತಿನ ತೀಥಲ್‌ನಲ್ಲಿ ಮೇ ತಿಂಗಳ 22 ರಂದು ಗುಜರಾತ್ ರಾಷ್ಟ್ರೀಯ ಶಾಲೆಗಳ ಶಿಕ್ಷಕರು ಒಂದು ಕಿರು ಸಮ್ಮೇಳನದ ಸಂದರ್ಭದಲ್ಲಿ ಭೇಟಿಯಾದಾಗ ಅ ಸಮ್ಮೇಳನದ ಸಂಚಾಲಕರು ಎಲ್ಲ ಆಹ್ವಾನಿತರಿಗೆ ಕಳಿಸಿದ ಪ್ರಶ್ನಾವಳಿ ನೋಡಿದರೆ ಈ ವಿಷಯ ಸ್ಪಷ್ಟವಾಗುತ್ತದೆ.

1 ನಮ್ಮ ಹಳ್ಳಿಗಳ ಅಗತ್ಯಗಳಿಗೆ ಸ್ಪಂದಿಸುವ ಮತ್ತು ಅತ್ಯಂತ ಉಪಯುಕ್ತ ಶಿಕ್ಷಣ ಯಾವುದು? ಆ ಶಿಕ್ಷಣವನ್ನು ಪ್ರತಿಯೊಂದು ಹಳ್ಳಿಗೂ ತಲುಪಿಸುವ ಮಾರ್ಗ ಯಾವುದು?

2 ಸಾಮೂಹಿಕ ಅನಕ್ಷರತೆ ಮತ್ತು ಮೌಢ್ಯವನ್ನು ತಡೆಗಟ್ಟುವುದು ಹೇಗೆ?

3 ಬೌದ್ಧಿಕ ಪ್ರಗತಿಗೆ ಸಾಕ್ಷರತೆಯು ಅತ್ಯಗತ್ಯವೇ? ಅಕ್ಷರಾಭ್ಯಾಸದಿಂದ ಪ್ರಾರಂಭಿಸಿ ನಂತರ ಓದುವುದು ಹಾಗೂ ಬರೆಯುವುದನ್ನು ಕಲಿಸುವ ಮಾದರಿಯ ಬೋಧನಾ ಪದ್ಧತಿಯು ಬೌದ್ಧಿಕ ಪ್ರಗತಿಗೆ ಅನಿವಾರ್ಯವೆನ್ನುವುದು ಕೇವಲ ಪೂರ್ವಗ್ರಹವೇ?

4 ವೃತ್ತಿ ಶಿಕ್ಷಣವನ್ನು ಎಲ್ಲ ಶಿಕ್ಷಣದ ಕೇಂದ್ರಬಿಂದುವನ್ನಾಗಿ ಮಾಡುವುದರ ಅಗತ್ಯ

5 ಪ್ರಸಕ್ತ ರಾಷ್ಟ್ರೀಯ ಶಾಲೆಗಳ ಭವಿಷ್ಯದ ನೋಟ

6 ಮಗುವಿನ ತಾಯ್ನುಡಿಯ ಮೂಲಕ ಸಂಪೂರ್ಣ ಶಿಕ್ಷಣವನ್ನು ನೀಡುವ ಸಾಧ್ಯತೆಯ ಕುರಿತಾಗಿ ನಿಮ್ಮ ಅನಿಸಿಕೆಗಳು

7 ರಾಷ್ಟ್ರೀಯ ಶಿಕ್ಷಣದ ಯಾವ ಬಹುಮುಖ್ಯ ಅಂಶವು ಪ್ರಚಲಿತ ಶಾಲೆಗಳಲ್ಲಿ ಕಾಣೆಯಾಗಿದೆ?

8 ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ಮೊದಲ ವರ್ಷಗಳಲ್ಲಿ ಹಿಂದಿ – ಹಿಂದೂಸ್ತಾನಿ ಭಾಷೆಯನ್ನು ಕಲಿಸುವ ಅಗತ್ಯದ ಬಗ್ಗೆ ನಿಮ್ಮ ಅನಿಸಿಕೆಗಳು

ಈ ಸಂಗತಿಗಳ ಕುರಿತಾಗಿ ತಮ್ಮ ಅಭಿಪ್ರಾಯಗಳನ್ನು ತಿಳಿಸಲು ಗಾಂಧೀಜಿಯವರನ್ನು ಆಹ್ವಾನಿಸಿದಾಗ ಅವರು ಹೇಳಿದ ಮಾತುಗಳ ಸಾರಾಂಶ:

" ನಾವು ಹಳ್ಳಿಗರ ಅಗತ್ಯಗಳಿಗೆ ಸೂಕ್ತವಾಗಿರುವ ಶಿಕ್ಷಣವನ್ನು ನೀಡಬೇಕಾದರೆ ನಾವು ವಿದ್ಯಾಪೀಠಗಳನ್ನು ಹಳ್ಳಿಗಳಿಗೆ ಒಯ್ಯಬೇಕು. ಹಳ್ಳಿಗರ ಅಗತ್ಯಗಳಿಗೆ ಸ್ಪಂದಿಸುವ ಶಿಕ್ಷಣವನ್ನು ನೀಡಲು ಸಾಧ್ಯವಾಗುವಂತೆ ಮತ್ತು ತರಬೇತಿಯು ಪ್ರಾಯೋಗಿಕವಾಗಿರುವಂತೆ ನಾವು ಅದನ್ನು ಶಿಕ್ಷಕ ತರಬೇತಿ ಸಂಸ್ಥೆಯಾಗಿ ಪರಿವರ್ತಿಸಬೇಕು. ನಗರದಲ್ಲಿರುವ ತರಬೇತಿ ಸಂಸ್ಥೆಯ ಮೂಲಕ ಹಳ್ಳಿಗರ ಅಗತ್ಯಗಳ ಬಗ್ಗೆ ನಮ್ಮ ಶಿಕ್ಷಕರಿಗೆ ಶಿಕ್ಷಣವನ್ನು ನೀಡಲು ಸಾಧ್ಯವಿಲ್ಲ. ಜೊತೆಗೆ ಹಳ್ಳಿಗಳ ಪರಿಸ್ಥಿತಿಯ ಬಗ್ಗೆ ಅವರಿಗೆ ಆಸಕ್ತಿ ಹುಟ್ಟುವಂತೆ ಮಾಡುವುದೂ ಅಸಾಧ್ಯ. ನಗರಿಗರಿಗೆ ಹಳ್ಳಿಗಳ ಬಗ್ಗೆ ಆಸಕ್ತಿ ಹುಟ್ಟಿಸುವುದು ಮತ್ತು ಅವರು ಅಲ್ಲಿ ವಾಸಿಸುವಂತೆ ಮಾಡುವುದು ಖಂಡಿತ ಸುಲಭವಲ್ಲ. ನಾನು ಇದನ್ನು ನಮ್ಮ ಸೇವಾಗ್ರಾಮದಲ್ಲಿ

ಪ್ರತಿದಿನವೂ ನೋಡುತ್ತಲೇ ಇದ್ದೇನೆ. ಒಂದು ವರ್ಷದ ವಾಸವು ನಮ್ಮನ್ನು ಹಳ್ಳಿಗರನ್ನಾಗಿ ಮಾಡಿದೆಯೆಂದಾಗಲೀ ಅಥವಾ ನಾವೆಲ್ಲರೂ ಸಮಷ್ಟಿಹಿತಕ್ಕಾಗಿ ಅವರೊಂದಿಗೆ ಒಂದಾಗಿದ್ದೇವೆಂದಾಗಲೀ ನಾನು ನಿಮಗೆ ಖಾತ್ರಿ ಕೊಡಲಾರೆ."

"ಮತ್ತೆ ಪ್ರಾಥಮಿಕ ಶಿಕ್ಷಣಕ್ಕೆ ಹೊರಳುವುದಾದರೆ, ಅಕ್ಷರ ಕಲಿಸುವುದರಿಂದ ಪ್ರಾರಂಭಿಸಿ ನಂತರ ಓದುವುದು ಮತ್ತು ಬರೆಯುವುದು ಹೀಗೆ ಶಿಕ್ಷಣವನ್ನು ಪ್ರಾರಂಭಿಸುವುದರಿಂದ ಮಕ್ಕಳ ಬೌದ್ಧಿಕವಿಕಾಸ ಕುಂಠಿತವಾಗುವುದೆಂದು ನನ್ನ ಖಚಿತ ಅಭಿಪ್ರಾಯ. ಅವರಿಗೆ ಇತಿಹಾಸ, ಭೂಗೋಳ, ಮಾನಸಿಕ ಲೆಕ್ಕಾಚಾರ ಮತ್ತು ಸ್ವಲ್ಪಮಟ್ಟಿಗಿನ ನೇಕಾರಿಕೆಯ ಕಲೆ ಇವುಗಳ ಬಗ್ಗೆ ಪ್ರಾಥಮಿಕ ತಿಳಿವಳಿಕೆ ಬರುವವರೆಗೆ ನಾನು ಅವರಿಗೆ ವರ್ಣಮಾಲೆಯನ್ನು ಕಲಿಸುವುದಿಲ್ಲ. ಈ ಮೂರರಿಂದ ಅವರ ಬುದ್ಧಿಶಕ್ತಿಯನ್ನು ಬೆಳೆಸುತ್ತೇನೆ. ತಕಲಿ ಅಥವಾ ನೂಲುವ ಯಂತ್ರದಿಂದ ಬುದ್ಧಿಶಕ್ತಿಯನ್ನು ಹೇಗೆ ಬೆಳೆಸಬಹುದೆನ್ನುವ ಪ್ರಶ್ನೆ ನಿಮ್ಮಲ್ಲಿ ಮೂಡುವುದು ಸಹಜ. ಆ ಕಲಿಕೆಯನ್ನು ಯಾಂತ್ರಿಕವಾಗಿ ಮಾಡದಿದ್ದಲ್ಲಿ ಇದನ್ನು ಅದ್ಭುತವಾಗಿ ಸಾಧಿಸಬಹುದು. ತಕಲಿ ಅಥವಾ ಚಕ್ರದ ಯಾಂತ್ರಿಕತೆಯನ್ನು ವಿವರಿಸುವಾಗ, ಹತ್ತಿಯ ಚರಿತ್ರೆಯನ್ನು ತಿಳಿಸಲು ಮತ್ತು ನಾಗರಿಕತೆಯೊಟ್ಟಿಗೆ ಅದರ ಸಂಬಂಧವನ್ನು ಹೇಳುವಾಗ, ಅದು ಬೆಳೆಯುವ ಭೂಮಿಗೆ ಅವನನ್ನು ಕರೆದುಕೊಂಡು ಹೋಗುವಾಗ, ಅವನು ನೂಲುವ ಸುತ್ತುಗಳನ್ನು ಎಣಿಸುವುದನ್ನು ಬೋಧಿಸುವಾಗ, ಅವನ ನೂಲಿನ ಸಾಮರ್ಥ್ಯ ಮತ್ತು ನುಣುಪನ್ನು ನಿಖರವಾಗಿ ಕಂಡುಹಿಡಿಯುವಾಗಪ್ರತಿ ಪ್ರಕ್ರಿಯೆಗೂ ಕಾರಣವನ್ನು ಮಗುವಿಗೆ ಹೇಳುತ್ತಾ ಹೋದರೆ ನೀವು ಅವನ ಆಸಕ್ತಿಯನ್ನು ಕೆರಳಿಸುತ್ತಲೇ ಅವನ ಕೈಗಳು, ಕಣ್ಣುಗಳು ಮತ್ತು ಬುದ್ಧಿಯನ್ನು ಪಳಗಿಸುತ್ತಾ ಇರುತ್ತೀರಿ. ನನ್ನ ಪ್ರಕಾರ ಈ ಆರಂಭಿಕ ತರಬೇತಿಗೆ ಆರು ತಿಂಗಳು ಸಾಕು. ಅಕ್ಷರ ಓದುವುದನ್ನು ಕಲಿಯಲು ಮಗು ಈ ವೇಳೆಗೆ ಬಹುಶಃ ಸಿದ್ಧವಾಗಿರಬಹುದು ಮತ್ತು ಹಾಗೆ ವೇಗವಾಗಿ ಮಾಡಲು ಸಾಧ್ಯವಾದಾಗ ಅವನು ಸರಳ ಚಿತ್ರಗಳನ್ನು ಬಿಡಿಸಲು ಸಿದ್ಧನಾಗಿರಬಹುದು. ಅದಾದ ನಂತರ ರೇಖಾಗಣಿತದ ಚಿತ್ರಗಳನ್ನು, ನಂತರ ಹಕ್ಕಿಗಳ ಚಿತ್ರಗಳನ್ನು ಬಿಡಿಸಲು ಕಲಿತ ಮೇಲೆ ಅವನು ಅಕ್ಷರಗಳನ್ನು ಬರೆಯಲು – ಗಮನಿಸಿ, ಗೀಚಲು ಅಲ್ಲ – ಪ್ರಾರಂಭಿಸಬಹುದು. ಚಿಕ್ಕಂದಿನಲ್ಲಿ ನನಗೆ ಗುರುಗಳು ಅಕ್ಷರವನ್ನು ಕಲಿಸಿದ ದಿನಗಳು ಇನ್ನೂ ನೆನಪಿದೆ ಹಾಗೂ ಅದೆಂಥ ನೀರಸ ಅನುಭವವಾಗಿತ್ತೆಂದೂ ಗೊತ್ತಿದೆ. ನನ್ನ ಬುದ್ಧಿಶಕ್ತಿಗೆ ತುಕ್ಕು ಹಿಡಿದಿದ್ದೇಕೆಂದು ಯಾರೂ ತಲೆಕೆಡಿಸಿಕೊಂಡಂತೆ ಕಾಣಲಿಲ್ಲ. ಕೈಬರಹ ಒಂದು ಸೊಗಸಾದ ಕಲೆ ಎಂದೇ ನಾನು ಪರಿಗಣಿಸುತ್ತೇನೆ. ಆದರೆ ಕಲಿಕೆಯ ಮೊದಲ ಹಂತದಲ್ಲಿ ಮಕ್ಕಳಿಗೆ ಅಕ್ಷರಾಭ್ಯಾಸವನ್ನು ಹೇರುವುದರಿಂದ ನಾವು ಅದನ್ನು ಕೊಲ್ಲುತ್ತಿದ್ದೇವೆ. ಹಾಗಾಗಿ, ಅದರ ಸಹಜ ಗಳಿಗೆ ಬರುವುದಕ್ಕಿಂತಲೂ ಮೊದಲೇ ಅಕ್ಷರಗಳನ್ನು ಬೋಧಿಸಲು ಉತ್ಸುಕರಾಗಿರುವುದರಿಂದ ಅವರ ಬರವಣಿಗೆಯ ಕಲೆಯನ್ನು ಹಿಂಸಿಸಿ ಅವರ ಬೆಳವಣಿಗೆಯನ್ನು ಕುಂಠಿತ ಮಾಡುತ್ತಿದ್ದೇವೆ."

"ನಿಜಕ್ಕೂ ನನ್ನ ಅಭಿಪ್ರಾಯದಲ್ಲಿ ನಾವು ಹಲುಬಬೇಕಿರುವುದು ಮತ್ತು ನಾಚಿಕೊಳ್ಳಬೇಕಿರುವುದು ನಮ್ಮಲ್ಲಿರುವ ಅನಕ್ಷರತೆಗಾಗಲೀ ಇಲ್ಲವೇ ಮೌಢ್ಯಕ್ಕಾಗಲೀ ಅಲ್ಲ. ಹಾಗಾಗಿ ನಾವು ವಯಸ್ಕರ ಶಿಕ್ಷಣಕ್ಕೂ ಸಹ ಒಂದು ಸಕ್ರಿಯ ಯೋಜನೆಯನ್ನು ರೂಪಿಸಬೇಕು. ಅದರಲ್ಲಿ ಗ್ರಾಮೀಣ ಜನತೆಗೆ ಶಿಕ್ಷಣವನ್ನು ನೀಡಲು, ಮೌಢ್ಯವನ್ನು ಹೊಡೆದೋಡಿಸಲು ಎಚ್ಚರಿಕೆಯಿಂದ ಆಯ್ಕೆ ಮಾಡಿರುವ ಶಿಕ್ಷಕರು ಮತ್ತು ಅಷ್ಟೇ ಎಚ್ಚರಿಕೆಯಿಂದ ರೂಪಿಸಿದ ಪಠ್ಯಕ್ರಮದ ಮೂಲಕ ಇದನ್ನು ಸಾಧಿಸಬಹುದು. ಇದರರ್ಥ, ನಾನು ಅವರಿಗೆ ವರ್ಣಮಾಲೆಯನ್ನು ಕಲಿಸುವುದಿಲ್ಲ ಎಂದಲ್ಲ. ಅದನ್ನು ನಾನು ಎಷ್ಟು

ಗೌರವಿಸುತ್ತೇನೆಂದರೆ ಕಲಿಕೆಯ ಸಾಧನವಾಗಿ ಅದರ ಉಪಯುಕ್ತತೆಯನ್ನು ಕುರಿತು ತಿರಸ್ಕಾರದಿಂದಾಗಲೀ, ಕುತ್ಸಿತ ಭಾವನೆಯಿಂದಾಗಲೀ ನೋಡಲು ಸಾಧ್ಯವೇ ಇಲ್ಲ. ವರ್ಣಮಾಲೆಯನ್ನು ಸರಳಗೊಳಿಸುವ ವಿಚಾರದಲ್ಲಿ ಪ್ರೊ. ಲಾಬಾಚ್ ಅವರ ಪರಿಶ್ರಮವನ್ನು ನಿಜಕ್ಕೂ ಮೆಚ್ಚಿಕೊಳ್ಳುತ್ತೇನೆ. ಹಾಗೆಯೇ ಈ ನಿಟ್ಟಿನಲ್ಲಿ ಪ್ರೊ. ಭಾಗವತ್ ಅವರ ಅತ್ಯುತ್ತಮ ಹಾಗೂ ಪ್ರಾಯೋಗಿಕ ಪ್ರಯತ್ನಗಳೂ ಸ್ತುತ್ಯರ್ಹವಾಗಿವೆ. ಅವರಿಗೆ ಅನುಕೂಲವಾದಾಗ ಸೇವಾಗ್ರಾಮಕ್ಕೆ ಬಂದು ಇಲ್ಲಿನ ಗಂಡಸರು, ಹೆಂಗಸರು ಮತ್ತು ಮಕ್ಕಳ ಮೇಲೆ ಅವರ ವಿಧಾನಗಳ ಪ್ರಯೋಗವನ್ನು ಮಾಡಬೇಕೆಂದು ಅವರನ್ನು ಆಮಂತ್ರಿಸಿದ್ದೇನೆ."

"ಗ್ರಾಮೀಣ ಕರಕುಶಲ ಕಲೆಯ ಬೋಧನೆಯನ್ನು  ಶಿಕ್ಷಣದ ಕೇಂದ್ರಬಿಂದುವನ್ನಾಗಿ ಪರಿಗಣಿಸಬೇಕೆಂಬ ಚಿಂತನೆಯ ಅಗತ್ಯ ಮತ್ತು  ಅದರ ಮೌಲ್ಯದ ಬಗ್ಗೆ ನನಗೆ ಭಿನ್ನಾಭಿಪ್ರಾಯವೇ ಇಲ್ಲ. ಭಾರತದ ಸಂಸ್ಥೆಗಳಲ್ಲಿ ಅನುಷ್ಠಾನಗೊಂಡಿರುವ ಪದ್ಧತಿಯನ್ನು ನಾನು ಶಿಕ್ಷಣವೆಂದು – ಅಂದರೆ ಮಾನವನ ಅತ್ಯುತ್ತಮ ಸಾಮರ್ಥ್ಯವನ್ನು ಹೊರಗೆಳೆಯುವ ಪ್ರಕ್ರಿಯೆಯೆಂದು –ಕರೆಯಲಾರೆ.ಬದಲಾಗಿ ಅದು ಮನಸ್ಸಿನ ವ್ಯಭಿಚಾರವೆಂದೇ ನನ್ನ ಭಾವನೆ.ಅದರಿಂದ ಮನಸ್ಸಿಗೆ ಮಾಹಿತಿ ದೊರೆಯುತ್ತದೇನೋ ಸರಿಯೇ, ಆದರೆ ತೀರಾ ಮೊದಲಿನಿಂದಲೇ ಗ್ರಾಮೀಣ ಕರಕುಶಲ ಕಲೆಗಳನ್ನು ಕೇಂದ್ರವಾಗಿಟ್ಟುಕೊಂಡು ನೀಡುವ ಮಾನಸಿಕ ತರಬೇತಿಯ ವಿಧಾನವು ಮನಸ್ಸಿನ ನೈಜ ಮತ್ತು ಶಿಸ್ತುಬದ್ಧ ವಿಕಾಸಕ್ಕೆ ದಾರಿಯಾಗುವುದಲ್ಲದೆ ಬೌದ್ಧಿಕ ಶಕ್ತಿ ಮತ್ತು ಪರೋಕ್ಷವಾಗಿ ಆಧ್ಯಾತ್ಮಿಕ ಶಕ್ತಿಯ ಸಂಚಯನವೂ ಆಗುತ್ತದೆ. ಲಲಿತಕಲೆಗಳನ್ನು ನಾನು ಕೀಳಾಗಿ ಪರಿಗಣಿಸುತ್ತೇನೆಂದು ಓದುಗರುತಪ್ಪಾಗಿ ಭಾವಿಸಬಾರದು. ಯಾವುದೇ ವಸ್ತುವನ್ನು ತಪ್ಪು ಜಾಗದಲ್ಲಿಟ್ಟಾಗ ಅದನ್ನು ಕಸವೆಂದು ಕರೆಯುತ್ತಾರೆ. ಇದಕ್ಕೆ ಪುರಾವೆಯಾಗಿ, ಸಂಪೂರ್ಣ ನಿರುಪಯುಕ್ತ ಮತ್ತು ಅಶ್ಲೀಲ ಎನ್ನಬಹುದಾದ ಸಾಹಿತ್ಯವನ್ನೇ ನಾನು ಹೆಸರಿಸಬಹುದಾಗಿದೆ.

ಹರಿಜನ್ , 5–6–'37

## 5

## ಸಾಕ್ಷರತೆ ಬೇಕೇ?

ಶಿಕ್ಷಣದ ಕುರಿತ ಈ ಅಂಕಣಗಳಲ್ಲಿ ನಾನು ಗಾಢವಾಗಿ ಪ್ರತಿಪಾದಿಸುತ್ತಿರುವ ಸಂಗತಿಗಳ ಬಗ್ಗೆ ನನಗೆ ಅನೇಕ ಬಗೆಯ ಪ್ರತಿಕ್ರಿಯೆಗಳು ಬರುತ್ತಿವೆ. ಅವುಗಳಲ್ಲಿ ಬಹುಮುಖ್ಯವಾದವುಗಳನ್ನು ನಾನಿಲ್ಲಿ ಹಂಚಿಕೊಳ್ಳಬಹುದೆನಿಸುತ್ತದೆ. ಮೊದಲನೆಯದಾಗಿ, ನಾನು ತಪ್ಪಾಗಿ ಹೇಳಿದ್ದೇನೆಂದು ಕಲ್ಪಿಸಿಕೊಂಡಿರುವ ಓದುಗರೊಬ್ಬರು ನಾನು ಸಾಕ್ಷರತೆಯನ್ನು ಕಡೆಗಣಿಸಿದ್ದೇನೆಂದು ಭಾವಿಸಿ ಮಾಡಿರುವ ಆಪಾದನೆಗೆ ಉತ್ತರ ನೀಡಲು ಬಯಸುತ್ತೇನೆ. ಅಂಥ ಗ್ರಹಿಕೆ ಉಂಟುಮಾಡುವ ಸಂಗತಿಗಳನ್ನು ನಾನೇನೂ ಯಾವ ಲೇಖನಗಳಲ್ಲೂ ಬರೆದಿಲ್ಲ. ನನ್ನ ಕಲ್ಪನೆಯ ಶಾಲೆಯಲ್ಲಿ ಮಕ್ಕಳಿಗೆ ಎಲ್ಲ ಬೋಧನೆಯನ್ನೂ ಅವರಿಗೆ ಕೊಡಲಾಗುವ ಕರಕುಶಲ ಕಲೆಯ ಮೂಲಕ ಮಾಡಲಾಗುತ್ತದೆಯೆಂದು ನಾನು ಹೇಳಿದ್ದೇನಲ್ಲವೇ? ಅದರಲ್ಲಿ ಸಾಕ್ಷರತೆಯೂ ಸೇರುತ್ತದೆ. ನನ್ನ ಯೋಜನೆಯಲ್ಲಿ, ಬರೆಯಲು ಕಲಿಯುವ ಮೊದಲೇಮಕ್ಕಳ

ಕೈಗಳು ಸಾಧನಗಳನ್ನು ಬಳಸಲು ಕಲಿಯುತ್ತವೆ. ಕಣ್ಣುಗಳು ಅಕ್ಷರಗಳ ಮತ್ತು ಪದಗಳ ಚಿತ್ರಗಳನ್ನು ಓದುತ್ತವೆ. ಏಕೆಂದರೆ, ಅವರಿಗೆ ಬದುಕಿನ ಇತರೆ ಸಂಗತಿಗಳು ತಿಳಿದಿರುತ್ತವೆ ಮತ್ತು ಕಿವಿಗಳು ಹೆಸರುಗಳು ಮತ್ತು ವಸ್ತುಗಳ ಮತ್ತು ವಾಕ್ಯಗಳ ಅರ್ಥವನ್ನು ಗ್ರಹಿಸುತ್ತವೆ. ಸಂಪೂರ್ಣ ತರಬೇತಿಯು ತುಂಬ ಸಹಜವಾಗಿ, ಪ್ರತಿಕ್ರಿಯಾತ್ಮಕವಾಗಿದ್ದು ಆ ಕಾರಣಗಳಿಂದ ಉಳಿದೆಲ್ಲವುಗಳಿಗೆ ಹೋಲಿಸಿದರೆ ಅತ್ಯಂತ ಕಡಿಮೆ ಖರ್ಚಿನದಾಗಿರುತ್ತದೆ. ಹಾಗಾಗಿ ನನ್ನ ಶಾಲೆಯ ಮಕ್ಕಳು ಬರೆಯಲು ಕಲಿಯುವುದಕ್ಕಿಂತ ಎಷ್ಟೋ ಮೊದಲೇ ಓದಲು ಕಲಿತಿರುತ್ತಾರೆ. ಅಲ್ಲದೆ ಅವರು ಬರೆಯುವಾಗ ಕಾಟು–ಚಿತ್ತು ಇರುವುದಿಲ್ಲ. ನನ್ನ ಬರವಣಿಗೆಯಂತಲ್ಲ! ಅಂದಹಾಗೆ, ನಾನು ಕೆಟ್ಟದಾಗಿ ಬರೆಯಲು ನನ್ನ ಬಾಲ್ಯದ ಶಿಕ್ಷಕರೇ ಕಾರಣ.ಮಕ್ಕಳು ತಾವು ಕಂಡ ವಸ್ತುಗಳ ಚಿತ್ರಗಳನ್ನು ರಚಿಸುವಷ್ಟೇ ಚೆನ್ನಾಗಿ ಅಕ್ಷರಗಳನ್ನು ಬರೆಯುತ್ತಾರೆ.  ನನ್ನ ಪರಿಕಲ್ಪನೆಯ ಶಾಲೆಗಳು ಎಂದಾದರೂ ಸಾಕಾರಗೊಂಡರೆ ಅಲ್ಲಿನ ವಿದ್ಯಾರ್ಥಿಗಳು ಜಗತ್ತಿನ ಯಾವುದೇ ಮುಂದುವರಿದ ಶಾಲೆಯ ವಿದ್ಯಾರ್ಥಿಗಳೊಂದಿಗೆ ಓದುವ ವೇಗದಲ್ಲಿ ಸ್ಪರ್ಧಿಸಬಲ್ಲರು ಎಂದು ಧೈರ್ಯದಿಂದ ಹೇಳಬಲ್ಲೆ. ಬರವಣಿಗೆಯ ವಿಷಯದಲ್ಲಿಯೂ ಈ ಮಾತು ನಿಜ. ಇಲ್ಲಿ ಬರವಣಿಗೆಯು ತಪ್ಪಿಲ್ಲದೆ ಇರಬೇಕು ಎನ್ನುವ ಮಾನದಂಡವನ್ನಿಟ್ಟುಕೊಳ್ಳಬೇಕು. ಸೇವಾಗ್ರಾಮದ ಮಕ್ಕಳು ರೂಢಿಗತ ವಿಧಾನದಲ್ಲಿ ಬರೆಯುತ್ತಿದ್ದಾರೆ ಎಂದು ಕೆಲವರು ಹೇಳಬಹುದು; ಆದರೆ ನನ್ನ ಮಾನದಂಡದ ಪ್ರಕಾರ ಅವರು ಸ್ಲೇಟು ಮತ್ತು ಕಾಗದವನ್ನು ಪೋಲು ಮಾಡುತ್ತಿದ್ದಾರೆ, ಅಷ್ಟೆ.

ಹರಿಜನ್ , 28–8–’37

## 6

## ನಯೀ ತಾಲೀಮ್: ನಿರೀಕ್ಷೆಗಳು

[ ಹಿಂದೂಸ್ತಾನೀ ತಾಲೀಮಿ ಸಂಘ್ , ವಾರ್ಧಾ ಅವರಿಂದ ಪ್ರಕಟವಾಗುತ್ತಿದ್ದ 'ನಯೀ ತಾಲೀಮ್' ಮಾಸಿಕ ಪತ್ರಿಕೆಗೆ ಅದರ ಉದ್ಘಾಟನೆಯ ಸಂದರ್ಭದಲ್ಲಿ ಕಳಿಸಲಾದ ಸಂದೇಶ – ಸಂ.]

ನಯೀ ತಾಲೀಮ್‌ನ ಹೊಸತನ ಅಥವಾ ಸ್ವೋಪಜ್ಞತೆಯನ್ನು ಅರ್ಥ ಮಾಡಿಕೊಳ್ಳುವುದು ಅಗತ್ಯ. ಹಳೆಯ ಪದ್ಧತಿಯಲ್ಲಿ ಒಳ್ಳೆಯದೇನಾದರೂ ಇದ್ದರೆ ಸಹಜವಾಗಿಯೇ ಅದನ್ನು ನಯೀ ತಾಲೀಮ್‌ನಲ್ಲಿ ಉಳಿಸಿಕೊಳ್ಳಲಾಗುವುದು; ಆದರೆ ಸಾಕಷ್ಟು ಪ್ರಮಾಣದ ಹೊಸ ಅಂಶಗಳೂ ಅದರಲ್ಲಿರುತ್ತವೆ. ನಯೀ ತಾಲೀಮ್  ನಿಜಕ್ಕೂ ಹೊಸತನದಿಂದ ಕೂಡಿದ್ದರೆ ಅದರಿಂದ ಈ ಪರಿಣಾಮಗಳಾಗಬೇಕು: ನಮ್ಮ ಹತಾಶೆಯು ಭರವಸೆಯೆಡೆಗೆ ತಿರುಗಬೇಕು.ನಮ್ಮ ಬಡತನ ಮತ್ತು ಹಸಿವು ನಮ್ಮನ್ನು ನಾವು ನಿರ್ವಹಣೆ ಮಾಡಿಕೊಳ್ಳಲು ಕಲಿಸಬೇಕು; ನಿರುದ್ಯೋಗವು ಉದ್ದಿಮೆ ಹಾಗೂ ಉದ್ಯೋಗದ ಕಡೆ ಸಾಗಬೇಕು; ವೈಷಮ್ಯವು ಸಾಮರಸ್ಯಗೆಡೆಗೆ ಸಾಗಬೇಕು. ಅದು  ನಮ್ಮ ಮಕ್ಕಳಿಗೆ ಓದು–ಬರಹವನ್ನು ಕಲಿಸಿ, ಅದರೊಟ್ಟಿಗೆ ಒಂದು ಕರಕುಶಲ ಕಲೆಯನ್ನು ಕಲಿಸಬೇಕು ಮತ್ತು ಅದು ಜ್ಞಾನಗಳಿಕೆಯ ಸಾಧನವಾಗಬೇಕು.

ಉತ್ ಮಂಗಾಯ್, 14–10–’38

ಭಾಗ ಎರಡು : ಮೂಲ ಶಿಕ್ಷಣ ಸಮ್ಮೇಳನ

7

## ಶೈಕ್ಷಣಿಕ ಸಮ್ಮೇಳನದ ಮುಂದಿರುವ ಪ್ರಶ್ನೆಗಳು

ಇತ್ತೀಚೆಗೆ ನವಭಾರತ ವಿದ್ಯಾಲಯ ಎಂದು ಪುನರ್ನಾಮಕರಣಗೊಂಡಿರುವ "ದ ಮಾರವಾಡಿ ಪ್ರೌಢಶಾಲೆ, ವಾರ್ಧಾ", ಈ ಶಾಲೆಯು ತನ್ನ ರಜತಮಹೋತ್ಸವವನ್ನು ಆಚರಿಸಿಕೊಳ್ಳುತ್ತಿದೆ. ನಾನು ನನ್ನ ಈ ಅಂಕಣಗಳಲ್ಲಿ ಬಲವಾಗಿ ಪ್ರತಿಪಾದಿಸುತ್ತಿರುವ ಶೈಕ್ಷಣಿಕ ಯೋಜನೆಯನ್ನು ಚರ್ಚಿಸಲು ರಾಷ್ಟ್ರವಾದದಿಂದ ಪ್ರೇರಿತರಾದ ಶಿಕ್ಷಣತಜ್ಞರ ಚಿಕ್ಕ ಸಮ್ಮೇಳನವೊಂದನ್ನು ಈ ಸಂದರ್ಭದಲ್ಲಿ ಆಯೋಜಿಸಲು ಈ ಸಂಸ್ಥೆಯ ಮುಖ್ಯಸ್ಥರು ಪರಿಕಲ್ಪಿಸಿದರು. ಅದರ ಕಾರ್ಯದರ್ಶಿಗಳಾದ ಶ್ರೀ ಶ್ರೀಮನ್ನಾರಾಯಣ್ ಅಗರವಾಲ್ ಅವರು ಇಂಥದೊಂದು ಸಮ್ಮೇಳನದ ಅಪೇಕ್ಷಣೀಯತೆಯ ಕುರಿತಾಗಿ ನನ್ನ ಜೊತೆ ಚರ್ಚಿಸಿ,ನಾನು ಅದನ್ನು ಅನುಮೋದಿಸಿದರೆ ಆ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಬೇಕೆಂದು ಕೇಳಿಕೊಂಡರು. ಅವರ ಎರಡೂ ಸಲಹೆಗಳು ನನಗೆ ಇಷ್ಟವಾದವು. ಈ ಸಮ್ಮೇಳನವು ವಾರ್ಧಾದಲ್ಲಿ ಅಕ್ಟೋಬರ್ ತಿಂಗಳ 22 ಮತ್ತು 23 ರಂದು ನಡೆಯಲಿದ್ದು ಆಹ್ವಾನಿತರು ಮಾತ್ರವೇ ಅದರಲ್ಲಿ ಭಾಗವಹಿಸುತ್ತಾರೆ. ಈ ವಿಷಯದಲ್ಲಿ ಆಳವಾದ ಆಸಕ್ತಿಯನ್ನು ಹೊಂದಿರುವವರು ಮತ್ತು ಚರ್ಚೆಗಳಲ್ಲಿ ಅರ್ಥಪೂರ್ಣವಾಗಿ ಭಾಗವಹಿಸಿ ಮೌಲಿಕ ಕೊಡುಗೆಗಳನ್ನು ನೀಡುವವರಿಗೆ ಮಾತ್ರ ಸಮ್ಮೇಳನಕ್ಕೆ ಆಹ್ವಾನವಿರುತ್ತದೆ. ಈ ಸಮ್ಮೇಳನವು ಕಣ್ಣು ಕುಕ್ಕುವ ಧಾಂ ಧೂಂ ತರಹದ್ದಲ್ಲ. ಸುಮ್ಮನೆ ಭೇಟಿ ಮಾಡಲು ಬರುವವರಿಗೆ ಆಹ್ವಾನವಿಲ್ಲ. ಅದು ಕೇವಲ ವ್ಯಾವಹಾರಿಕ ಸಭೆ ಮಾತ್ರ. ಆಯ್ದ ಕೆಲವೇ ಪತ್ರಕರ್ತರಿಗೆ ಪಾಸುಗಳನ್ನು ನೀಡಲಾಗುತ್ತದೆ. ಒಬ್ಬರು ಇಲ್ಲವೇ ಇಬ್ಬರು ಪ್ರತಿನಿಧಿಗಳನ್ನು ಕಳಿಸಿ ವರದಿ ಮಾಡಬೇಕೆಂದು ಪತ್ರಿಕೆಯವರಿಗೆ ನನ್ನ ಸಲಹೆ.

ನಾನು ಈ ಸಮ್ಮೇಳನವನ್ನುಸಂಪೂರ್ಣಆತ್ಮವಿಶ್ವಾಸದಿಂದ ಮತ್ತು ಅತ್ಯಂತ ವಿನಯದಿಂದಲೇ ಎದುರು ನೋಡುತ್ತಿದ್ದೇನೆ. ನನಗೆ ಮುಕ್ತ ಮನಸ್ಸು, ಕಲಿಯುವ ಮತ್ತು ಅಗತ್ಯವೆನಿಸಿದರೆ ನನ್ನ ಚಿಂತನೆಗಳನ್ನು ಪರಿಷ್ಕರಿಸಿ ತಿದ್ದಿಕೊಳ್ಳುವ ಮನೋಧರ್ಮವಿದೆ.

ನನ್ನ ಮನಸ್ಸಿಗೆ ಈಗ ಬರುತ್ತಿರುವ, ಸಮ್ಮೇಳನದಲ್ಲಿ ಪರಿಗಣಿಸಬೇಕೆಂದು ನಾನು ಆಶಿಸುವ ಪ್ರಸ್ತಾವನೆ ಹೀಗಿದೆ:

1. ಈಗ ಚಾಲನೆಯಲ್ಲಿರುವ ಶಿಕ್ಷಣ ಪದ್ಧತಿಯು ಯಾವುದೇ ರೂಪ ಅಥವಾ ಆಕಾರದಲ್ಲಿ ರಾಷ್ಟ್ರದ ಅಗತ್ಯಕ್ಕೆ ಸ್ಪಂದಿಸುತ್ತಿಲ್ಲ. ಉನ್ನತ ಶಿಕ್ಷಣದ ಎಲ್ಲ ಕಡೆಯೂ ಇಂಗ್ಲೀಷನ್ನು ಬೋಧನಾ ಮಾಧ್ಯಮವನ್ನಾಗಿ ಮಾಡಿರುವುದು ಅತಿಶಿಕ್ಷಿತ ವರ್ಗದ ಕೆಲವರು ಮತ್ತು ಅಶಿಕ್ಷಿತ ಹಲವರ ನಡುವೆ ದೊಡ್ಡ ಕಂದಕವನ್ನೇ ಸೃಷ್ಟಿಸಿದೆ. ಸಾಮಾನ್ಯ ಜನರಿಗೆ ಜ್ಞಾನ ಹರಡುವುದಕ್ಕೆ ಇದು ಅತಿ ದೊಡ್ಡ ತಡೆಯಾಗಿದೆ. ಇಂಗ್ಲೀಷಿಗೆ ನಾವು ನೀಡಿರುವ ಅತಿ ಹೆಚ್ಚು ಪ್ರಾಮುಖ್ಯವು ಶಿಕ್ಷಿತ ವರ್ಗಕ್ಕೆ ಒಂದು ಹೊರೆಯಾಗಿ

ಪರಿಣಮಿಸಿ ಅವರನ್ನು ಜೀವನವಿಡೀ ಮಾನಸಿಕವಾಗಿ ದುರ್ಬಲಗೊಳಿಸಿ ಅವರನ್ನು ಅವರ ನಾಡಿನಲ್ಲಿಯೇ ಅಪರಿಚಿತರನ್ನಾಗಿ ಮಾಡುತ್ತದೆ. ವೃತ್ತಿ ಸಂಬಂಧಿತ ತರಬೇತಿಯ ಕೊರತೆಯಿಂದಾಗಿ ಶಿಕ್ಷಿತ ವರ್ಗವು ಯಾವುದೇ ಉತ್ಪಾದನಾ ಕಾರ್ಯಕ್ಕೆ ಯೋಗ್ಯರಲ್ಲದಂತೆ ಮಾಡುವುದಲ್ಲದೆ ಅವರಿಗೆ ದೈಹಿಕವಾಗಿಯೂ ಹಾನಿ ಮಾಡಿದೆ. ಪ್ರಾಥಮಿಕ ಶಿಕ್ಷಣಕ್ಕಾಗಿ ಮಾಡುತ್ತಿರುವ ಖರ್ಚು ಅನುಪಯುಕ್ತವಾಗಿದ್ದು ಅಲ್ಲಿ ಕಲಿಸಿರುವ ಅಲ್ಪ ಸ್ವಲ್ಪ ಜ್ಞಾನವು ಅನತಿ ಕಾಲದಲ್ಲಿಯೇ ಮರೆತುಹೋಗಿ ಅದು ಹಳ್ಳಿಯಲ್ಲಾಗಲೀ, ನಗರಗಳಲ್ಲಾಗಲೀ ಬೆಲೆಯಿರದ ಸರಕಾಗಿರುತ್ತದೆ. ಪ್ರಸ್ತುತ ಶೈಕ್ಷಣಿಕ ವ್ಯವಸ್ಥೆಯಿಂದಾಗುವ ಅನುಕೂಲಗಳು ಆ ವ್ಯವಸ್ಥೆಯಲ್ಲಿನ ಪ್ರಮುಖ ತೆರಿಗೆದಾರನ ಮಕ್ಕಳಿಗೆ ದೊರೆಯುತ್ತಿರುವುದು ಮಾತ್ರ ಅತ್ಯಂತ ಕನಿಷ್ಟ ಪ್ರಮಾಣದಲ್ಲಿ.

2. ಪ್ರಾಥಮಿಕ ಶಿಕ್ಷಣದ ಕೋರ್ಸನ್ನು ಕಡಿಮೆಯೆಂದರೂ ಏಳು ವರ್ಷಗಳಿಗೆ ವಿಸ್ತರಿಸಬೇಕು ಮತ್ತು ಮೆಟ್ರಿಕ್ಯುಲೇಷನ್ ಮಟ್ಟದಲ್ಲಿ ಗಳಿಸುವ ಸಾಮಾನ್ಯ ಜ್ಞಾನವನ್ನು ಇಲ್ಲಿ ಸೇರಿಸಬೇಕು ಹಾಗೂ ಇಂಗ್ಲೀಷನ್ನು ಕಡಿತಗೊಳಿಸಿ ಒಂದು ನಿಜಕ್ಕೂ ಗಣನೀಯ ವೃತ್ತಿಶಿಕ್ಷಣವನ್ನು ನೀಡಬೇಕು.
3. ಹುಡುಗರು ಮತ್ತು ಹುಡುಗಿಯರ ಸರ್ವತೋಮುಖ ಬೆಳವಣಿಗೆಗೆ ಸಾಧ್ಯವಿರುವಲ್ಲೆಲ್ಲಾ ಎಲ್ಲ ತರಬೇತಿಗಳನ್ನೂ ಲಾಭ ಕೊಡುವ ವೃತ್ತಿಯ ಮೂಲಕವೇ ನೀಡಬೇಕು. ಇದನ್ನೇ ಬೇರೆ ರೀತಿಯಲ್ಲಿ ಹೇಳುವುದಾದರೆ,ವೃತ್ತಿಗಳು ಎರಡು ಉದ್ದೇಶಗಳನ್ನು ಈಡೇರಿಸಬೇಕು. ವಿದ್ಯಾರ್ಥಿಯು ತನ್ನ ಪರಿಶ್ರಮದ ಉತ್ಪನ್ನಗಳ ಮೂಲಕ ತನ್ನ ಶಿಕ್ಷಣದ ಖರ್ಚನ್ನು ಸಂಪಾದಿಸಿಕೊಳ್ಳುವುದರ ಜೊತೆಗೆ ಶಾಲೆಯಲ್ಲಿ ಕಲಿತ ವೃತ್ತಿಯ ಮೂಲಕ ತನ್ನೊಳಗಿರುವ ಮಾನವನನ್ನು ವಿಕಸನಗೊಳಿಸಬೇಕು.

ಭೂಮಿ, ಕಟ್ಟಡ ಮತ್ತು ಉಪಕರಣಗಳ ಖರ್ಚನ್ನು ಮಕ್ಕಳ ಪರಿಶ್ರಮದಿಂದ ಬರುವ ಆದಾಯದಿಂದ ಹೊಂದಿಸಬೇಕಿರುವುದಿಲ್ಲ.

ಹತ್ತಿ, ಉಣ್ಣೆ ಮತ್ತು ರೇಷ್ಮೆ ಉದ್ಯಮಕ್ಕೆ ಸಂಬಂಧಿಸಿದ ಎಲ್ಲ ಪ್ರಕ್ರಿಯೆಗಳು, ಅಂದರೆ ಸ್ವಚ್ಛಗೊಳಿಸುವುದು, ಹತ್ತಿಯಿಂದ ಬೀಜವನ್ನು ಬೇರ್ಪಡಿಸುವುದು, ಹಿಂಜುವುದು. ನೂಲುವುದು, ಬಣ್ಣ ಹಾಕುವುದು, ಅಳತೆಗೆ ಹೊಂದಿಸಿ ವಿಂಗಡಿಸುವುದು, ಹಾಸುನೂಲು ಜೋಡಿಸುವುದು, ದಾರ ಹೊಸೆಯುವುದು, ವಿನ್ಯಾಸಗೊಳಿಸುವುದು ಮತ್ತು ಹೆಣೆಯುವುದು. ಕಸೂತಿ, ಹೊಲಿಗೆ, ಕಾಗದ ತಯಾರಿಕೆ, ಕತ್ತರಿಸುವುದು, ಬುಕ್ ಬೈಂಡಿಂಗ್, ಕಪಾಟು ತಯಾರಿಕೆ, ಆಟಿಗೆ ತಯಾರಿಕೆ, ಬೆಲ್ಲ ಮಾಡುವುದು ಇವೆಲ್ಲವೂ ಸುಲಭವಾಗಿ ಕಲಿಯಬಹುದಾದ ಕೆಲಸಗಳು; ಅನುಮಾನವೇ ಇಲ್ಲ. ಅಲ್ಲದೆ ಇದಕ್ಕೆ ಹೆಚ್ಚಿನ ಬಂಡವಾಳದ ಅಗತ್ಯವೇನೂ ಇರುವುದಿಲ್ಲ.

ಈ ಬಗೆಯ ಪ್ರಾಥಮಿಕ ಶಿಕ್ಷಣವು ಹುಡುಗರು ಮತ್ತು ಹುಡುಗಿಯರಿಗೆ ತಮ್ಮ ಹಣವನ್ನು ತಾವೇ ಸಂಪಾದಿಸಲು ಸಾಧ್ಯವಾಗಿಸಬೇಕು.  ಸರಕಾರವು ಈ ರೀತಿಯಲ್ಲಿ ಕಲಿತವರಿಗೆ ಉದ್ಯೋಗ ಅವಕಾಶಗಳನ್ನು ಖಾತ್ರಿಪಡಿಸಬೇಕುಅಥವಾತಾನು ನಿಗದಿಪಡಿಸಿದ ಬೆಲೆಗಳಲ್ಲಿ ಇಂಥ ಉತ್ಪನ್ನಗಳನ್ನು ಉದ್ದಿಮೆದಾರರಿಂದ ಖರೀದಿಸಬೇಕು.

4. ಉನ್ನತ ಶಿಕ್ಷಣವನ್ನು ಖಾಸಗಿಯವರಿಗೆ ಬಿಟ್ಟುಬಿಡಬೇಕು. ರಾಷ್ಟ್ರೀಯ ಅಗತ್ಯಗಳನ್ನು ಪೂರೈಸಲು: ಅದು ಉದ್ದಿಮೆಗಳಲ್ಲಿ ಆಗಿರಬಹುದು, ತಾಂತ್ರಿಕ ಆಗಿರಬಹುದು ಇಲ್ಲವೇ ಕಲೆಯಲ್ಲಿ ಆಗಿರಬಹುದು.

ಸರಕಾರಿ ವಿಶ್ವವಿದ್ಯಾನಿಲಯಗಳು ಪರೀಕ್ಷೆ ಮಾಡುವ ಹೊಣೆಯನ್ನು ಮಾತ್ರ ಹೊತ್ತುಕೊಳ್ಳಬೇಕು ಮತ್ತು ಅವು ಇಂತಹ ಪರೀಕ್ಷೆಗಳಿಗೆ ತಾವು ವಿಧಿಸುವ ಶುಲ್ಕದಿಂದಲೇ ನಡೆಯುವ ಸ್ವಾಯತ್ತ ಸಂಸ್ಥೆಗಳಾಗಿರಬೇಕು.

ವಿಶ್ವವಿದ್ಯಾನಿಲಯಗಳು ಇಡೀ ಶಿಕ್ಷಣ ಕ್ಷೇತ್ರವನ್ನು ನೋಡಿಕೊಳ್ಳುತ್ತವೆ ಮತ್ತು ಶಿಕ್ಷಣದ ಬೇರೆ ಬೇರೆ ವಿಭಾಗಗಳ ವಿವಿಧ ಕೋರ್ಸುಗಳನ್ನು ರೂಪಿಸಿ ಅವುಗಳನ್ನು ಅನುಮೋದಿಸುತ್ತವೆ. ಆಯಾ ವಿಶ್ವವಿದ್ಯಾನಿಲಯಗಳ ಪೂರ್ವಾನುಮತಿ ಇಲ್ಲದೆ ಯಾವ ಖಾಸಗಿ ಸಂಸ್ಥೆ ಕೂಡ ನಡೆಯುವಂತಿರಬಾರದು. ವಿಶ್ವವಿದ್ಯಾನಿಲಯಗಳ ಸನ್ನದುಗಳನ್ನುಉದಾರ ಮನಸ್ಸಿನಿಂದ ಆದರೆ ಮೌಲ್ಯಾಧಾರಿತ ಮತ್ತು ನಂಬಿಕೆಗೆ ಅರ್ಹರಾದ ವ್ಯಕ್ತಿಗಳಿಗೆ ನೀಡಬೇಕು. ಮುಖ್ಯವಾಗಿ, ವಿಶ್ವವಿದ್ಯಾನಿಲಯಗಳಿಂದಾಗಿ ಸರಕಾರಕ್ಕೆ ಯಾವುದೇ ವಿಧದ ಖರ್ಚು ಇರಕೂಡದು. ಆದರೆ ಸರಕಾರವು ಕೇಂದ್ರೀಯ ಶಿಕ್ಷಣ ಇಲಾಖೆಯ ಖರ್ಚು–ವೆಚ್ಚವನ್ನು ತಾನೇ ನೋಡಿಕೊಳ್ಳುತ್ತದೆ.

ತನ್ನ ಅಗತ್ಯಗಳನ್ನು ಪೂರೈಸುವ ಸಲುವಾಗಿ ಉನ್ನತ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿ ನಡೆಸುವ ಜವಾಬ್ದಾರಿಸರಕಾರಕ್ಕಿದೆ; ಮೇಲ್ಕಾಣಿಸಿದ ಯೋಜನೆಯ ನೆಪ ಹೂಡಿಅದರಿಂದ ತಪ್ಪಿಸಿಕೊಳ್ಳುವಂತಿಲ್ಲ.

ಈ ಯೋಜನೆಯನ್ನು ಸಂಪೂರ್ಣವಾಗಿ ಕಾರ್ಯಗತಗೊಳಿಸಿದರೆ ಅದು ಸರಕಾರದ ಬಹುಮುಖ್ಯಕಾಳಜಿಯಾಗಿರುವ ರಾಷ್ಟ್ರದ ಭವಿಷ್ಯದ ನಿರ್ಮಾಪಕರಾದ ಯುವಜನರ ತರಬೇತಿಯ ಪ್ರಶ್ನೆಗೆ ಸೂಕ್ತ ಜವಾಬಾಗಬಲ್ಲದು.

ಹರಿಜನ್ , 2–10–'37

## 8

## ಪ್ರಾಥಮಿಕ ಪ್ರಶ್ನೆ

[ ವಾರ್ಧಾದಲ್ಲಿ 22–23, ಅಕ್ಟೋಬರ್ 1937 ರಂದು ನಡೆದ ಶೈಕ್ಷಣಿಕ ಸಮ್ಮೇಳನದಲ್ಲಿ ಗಾಂಧೀಜಿಯವರು ಮಾಡಿದ ಆರಂಭಿಕ ಭಾಷಣ.]

ಮೊದಲಿಗೆ ಗಾಂಧೀಜಿಯವರು ಸಂಘಟಕರ ಆಹ್ವಾನಕ್ಕೆ ಮನ್ನಣೆ ನೀಡಿ ಬಂದ ಎಲ್ಲರಿಗೂ ಧನ್ಯವಾದಗಳನ್ನು ಅರ್ಪಿಸಿ ತಾವು ಈ ಸಮ್ಮೇಳನದಲ್ಲಿ ಅಧ್ಯಕ್ಷರೋ ಇಲ್ಲವೇ ಸದಸ್ಯರೋ ಎಂದು ಕೇಳಿದರಲ್ಲದೆ ತಾವು ರೂಪಿಸಿರುವ ಕೆಲವು

ಪ್ರಸ್ತಾವನೆಗಳ* ಕುರಿತಾಗಿ ಅಭಿಪ್ರಾಯಗಳನ್ನು ಚರ್ಚಿಸಲು, ಅದರಲ್ಲಿಯೂ ವಿಶೇಷವಾಗಿ ಇವುಗಳನ್ನು ವಿರೋಧಿಸುವವರ ಮಾತುಗಳನ್ನು ಆಲಿಸಲು ಎಲ್ಲರನ್ನೂ ಇಲ್ಲಿಗೆ ಕರೆದಿರುವುದಾಗಿ ಹೇಳಿದರು. ಅವರು ಮುಕ್ತ, ಪ್ರಾಮಾಣಿಕ ಮತ್ತು ಸಮಗ್ರ ಚರ್ಚೆಯಾಗಲೆಂದು ಬಯಸಿದರಲ್ಲದೆ ಈ ಪೆಂಡಾಲಿನ ಹೊರಗೆ ಬಂದು ಸ್ನೇಹಿತರನ್ನು ಭೇಟಿ ಮಾಡಲು ಆರೋಗ್ಯದ ಕಾರಣದಿಂದಾಗಿ ಸಾಧ್ಯವಾಗದೆ ಇರುವುದಕ್ಕಾಗಿ ವಿಷಾದವನ್ನೂ ವ್ಯಕ್ತಪಡಿಸಿದರು.

ಈ ಪ್ರಸ್ತಾವನೆಗಳು ಪ್ರಾಥಮಿಕ ಮತ್ತು ಕಾಲೇಜು ಶಿಕ್ಷಣಕ್ಕೆ ಸಂಬಂಧಿಸಿವೆಯಾದರೂ ಅವು ಪ್ರಮುಖವಾಗಿ ಪ್ರಾಥಮಿಕ ಶಿಕ್ಷಣದ ಸಂಗತಿಗಳನ್ನೇ ಕುರಿತಾಗಿದೆಯೆಂದು ಅವರು ಹೇಳಿದರು. ಅವರು ಮಾಧ್ಯಮಿಕ ಶಿಕ್ಷಣವನ್ನು ಪ್ರಾಥಮಿಕ ಶಿಕ್ಷಣದೊಳಗೆ ಸೇರಿಸಿಕೊಂಡಿದ್ದರು. ಏಕೆಂದರೆ ಅವರು 1915 ರಿಂದ ಪ್ರಾರಂಭಿಸಿದ ತಮ್ಮ ದೇಶಸಂಚಾರದಲ್ಲಿ ಗಮನಿಸಿದಂತೆ ನಮ್ಮ ಹಳ್ಳಿಹಳ್ಳಿಗಳಲ್ಲಿ ಇದ್ದ ಒಂದೇ ಶಿಕ್ಷಣವೆಂದರೆ ಪ್ರಾಥಮಿಕ ಶಿಕ್ಷಣವಾಗಿತ್ತು. ಅವರು ಕೇವಲ ಈ ಹಳ್ಳಿಗಳ, ಹೆಚ್ಚಾಗಿ ಅಶಿಕ್ಷಿತರಾಗಿದ್ದ ಗಂಡು ಮತ್ತು ಹೆಣ್ಣುಮಕ್ಕಳ ಅಗತ್ಯಗಳ ಬಗ್ಗೆಯೇ ಮಾತನಾಡುತ್ತಿದ್ದರು. ಅವರಿಗೆ ಕಾಲೇಜು ಶಿಕ್ಷಣದ ನೇರ ಅನುಭವವಿರಲಿಲ್ಲ. ಆದರೆ ಅಂತಹ ನೂರಾರು ಕಾಲೇಜು ವಿದ್ಯಾರ್ಥಿಗಳ ಸಂಪರ್ಕದಲ್ಲಿದ್ದು ಅವರೊಡನೆ ಸಾಕಷ್ಟು ಚರ್ಚೆ ನಡೆಸಿ, ಅವರೊಡನೆ ಪತ್ರ ವ್ಯವಹಾರವನ್ನಿಟ್ಟುಕೊಂಡಿದ್ದರಿಂದ ಅವರ ಅಗತ್ಯಗಳು, ಸೋಲುಗಳು, ಮತ್ತು ಅವರು ಅನುಭವಿಸುತ್ತಿದ್ದ ಆರೋಗ್ಯ ಸಮಸ್ಯೆಗಳ ಬಗ್ಗೆ ತಿಳಿದಿದ್ದರು. ಆದರೆ ಈ ಸಂದರ್ಭದಲ್ಲಿ ಪ್ರಾಥಮಿಕ ಶಿಕ್ಷಣದ ಮಿತಿಯಲ್ಲಿಯೇ ಚರ್ಚೆಯನ್ನು ನಡೆಸುವುದು ಎಂದಾಯಿತು. ಏಕೆಂದರೆ, ಪ್ರಾಥಮಿಕ ಶಿಕ್ಷಣದ ಮುಖ್ಯ ಸಮಸ್ಯೆ ದೂರವಾದರೆ ಮರುಕ್ಷಣವೇ ಕಾಲೇಜು ಶಿಕ್ಷಣದ ಸಮಸ್ಯೆ ಬಗೆಹರಿಯುತ್ತದೆ.

## ದೈಹಿಕ ತರಬೇತಿಯ ಮೂಲಕ ಶಿಕ್ಷಣ

**ಹಾಲಿ ಇರುವ** ಪ್ರಾಥಮಿಕ ಶಿಕ್ಷಣವು ವ್ಯರ್ಥ ಮಾತ್ರವಲ್ಲ, ಅದು ಹಾನಿಕಾರಕವೂ ಆಗಿರುವುದಾಗಿ ಅವರ ಖಚಿತ ಅಭಿಪ್ರಾಯವಾಗಿತ್ತು. ಹೆಚ್ಚಿನ ಬಾಲಕರು ಅವರ ತಂದೆ–ತಾಯಿಗಳ ಮತ್ತು ಅವರ ಜನ್ಮಜಾತ ವೃತ್ತಿಯ ಪಾಲಿಗೆ ಕಳೆದುಹೋಗಿದ್ದರು. ಅವರು ದುರಭ್ಯಾಸಗಳನ್ನು ಹಾಗೂ ನಗರದ ಸ್ವಭಾವಗಳನ್ನು ಕಲಿತಿದ್ದರು. ಎಂಥದೋ ಅಲ್ಪಜ್ಞಾನ ಅವರಿಗೆ ಲಭಿಸಿದೆ – ಅದು ಶಿಕ್ಷಣವಂತೂ ಖಂಡಿತ ಅಲ್ಲ. ಗಾಂಧೀಜಿಯವರ ಪ್ರಕಾರ ಇದಕ್ಕೆ ಸೂಕ್ತ ಉಪಾಯವೆಂದರೆ ವೃತ್ತಿಸಂಬಂಧಿತ ಹಾಗೂ ದೈಹಿಕ ತರಬೇತಿಯ ಮೂಲಕ ಶಿಕ್ಷಣ ನೀಡುವುದಾಗಿದೆ. ತಮ್ಮ ಸ್ವಂತ ಮತ್ತು ಇತರ ಮಕ್ಕಳಿಗೆ ದಕ್ಷಿಣ ಆಫ್ರಿಕಾದಲ್ಲಿನ ಟಾಲ್‌ಸ್ಟಾಯ್ ಫಾರ್ಮ್ ನಲ್ಲಿ ಶಿಕ್ಷಣ ನೀಡಿದ ಕೆಲಮಟ್ಟಿನ ಅನುಭವ ಅವರಿಗಿತ್ತು. ಆ ಮಕ್ಕಳಲ್ಲಿ ಎಲ್ಲ ಜಾತಿ ಮತ್ತು ಪಂಗಡಗಳ ಉತ್ತಮ, ಅನುತ್ತಮ ಮತ್ತು ಉಡಾಫೆ ಸ್ವಭಾವದ ಮಕ್ಕಳಿದ್ದು ಅವರಿಗೆ ಮರಗೆಲಸ, ಚಪ್ಪಲಿ ತಯಾರಿಕೆಯಂಥ ಕೈಕೆಲಸದ ತರಬೇತಿಯನ್ನು ಕೊಡಲಾಗಿತ್ತು. ಈ ಕೌಶಲಗಳನ್ನು ಅವರು ಟ್ರಾಪಿಸ್ಟ್ ಧರ್ಮಪೀಠದ

* ಇವನ್ನು ಹಿಂದಿನ ಅಧ್ಯಾಯದಲ್ಲಿ ನೀಡಲಾಗಿದೆ.

ಕಾಲೆನಬಾಚ್ ಅವರ ಬಳಿ ಕಲಿತಿದ್ದರು. ಅವರ ಮಕ್ಕಳಾಗಲೀ ಉಳಿದ ಮಕ್ಕಳಾಗಲೀ ಏನನ್ನೂ ಕಳೆದುಕೊಳ್ಳಲಿಲ್ಲವೆನ್ನುವ ವಿಶ್ವಾಸ ಅವರದಾಗಿತ್ತು. ಆದರೆ ಸಮಯದ ಅಭಾವದಿಂದಾಗಿ, ತಮಗೆ ಅಥವಾ ಮಕ್ಕಳಿಗೆ ತೃಪ್ತಿಕರವೆನಿಸುವ ಶಿಕ್ಷಣವನ್ನು ನೀಡಲು ಅವರಿಗೆ ಸಾಧ್ಯವಾಗಲಿಲ್ಲ ಎನ್ನುವ ಕೊರಗೂ ಅವರಿಗಿತ್ತು.

ಅವರ ಒತ್ತಾಸೆಯ ಸಾರವು ಮಕ್ಕಳು ಕಲಿಯುವ ವೃತ್ತಿ ಸಂಬಂಧಿತ ಕೌಶಲಗಳಾಗಿರದೆ ದೈಹಿಕ ತರಬೇತಿಯ ಮೂಲಕ ಆಗುವ ಶಿಕ್ಷಣವೇ ಆಗಿದ್ದಿತು. ಎಲ್ಲ ಅಂದರೆ ಇತಿಹಾಸ, ಭೂಗೋಳ, ಗಣಿತ ಮತ್ತು ವಿಜ್ಞಾನ ಇವನ್ನು ದೈಹಿಕ ಪರಿಶ್ರಮದ ಮೂಲಕ ಕಲಿಯುವುದು. ಮಧ್ಯಯುಗದಲ್ಲಿ ಬೇರೇನನ್ನೂ ಕಲಿಸುತ್ತಿರಲಿಲ್ಲ ಎನ್ನುವ ಆಕ್ಷೇಪಣೆಯೂ ಬರಬಹುದು. ಆದರೆ ಆಗ ವೃತ್ತಿಸಂಬಂಧಿತ ತರಬೇತಿಗಳು ಶೈಕ್ಷಣಿಕ ಉದ್ದೇಶಗಳನ್ನೇನೂ ಹೊಂದಿರಲಿಲ್ಲ. ಈ ಕಾಲಘಟ್ಟದಲ್ಲಿ ಒಂದು ನಿರ್ದಿಷ್ಟಕಸುಬಿನ ಸಮುದಾಯದಲ್ಲಿ ಜನಿಸಿದವರು ಆ ಕಸುಬನ್ನು ಮರೆತು ಕಾರಕೂನಿಕೆಗೆ ಹೋಗಿದ್ದರಿಂದ ಗ್ರಾಮೀಣಪ್ರದೇಶವು ಅವರನ್ನು ಕಳೆದುಕೊಂಡಿತು. ಹಾಗಾಗಿ, ನೀವು ಯಾವುದೇ ಸಾಧಾರಣ ಹಳ್ಳಿಗೇ ಹೋದರೆ ಅಲ್ಲಿ ನುರಿತ ಬಡಗಿ ಇಲ್ಲವೇ ಕಮ್ಮಾರ ನಿಮಗೆ ಕಾಣಿಸುವುದಿಲ್ಲ. ಕರಕುಶಲ ಕಲೆ ಹೆಚ್ಚೂಕಡಿಮೆ ನಾಶವಾಯಿತು ಮತ್ತು ನೂಲುವ ಚಕ್ರವನ್ನು ಮೂಲೆಗೆಸೆಯಲಾಯಿತು. ಅದನ್ನು ಲ್ಯಾಂಕಾಶೈರ್‌ಗೆ ಸಾಗಿಸಿ ಅದನ್ನು ನಾವಿಂದು ಕಾಣುತ್ತಿರುವ ರೂಪಕ್ಕೆ ಅಭಿವೃದ್ಧಿಪಡಿಸಲಾಯಿತು. ಕುಶಲಕಲೆಗಳನ್ನು ಅಭಿವೃದ್ಧಿಗೊಳಿಸುವ ಬ್ರಿಟಿಷ್ ಅಸಾಧಾರಣ ಪ್ರತಿಭೆಯಿಂದಾಗಿಇದು ಸಾಧ್ಯವಾಯಿತು. ಕೈಗಾರಿಕೀಕರಣದ ಕುರಿತಾಗಿ ಗಾಂಧೀಜಿಯವರ ನಿಲುವಿನ ಹೊರತಾಗಿಯೂ ಈ ಮಾತು ನಿಜ.

## ತಕಲಿ – ಒಂದು ಉತ್ಪಾದಕ ಆಟಿಗೆ

ಕರಕುಶಲದ ಸಂಪೂರ್ಣ ಕಲೆ ಮತ್ತು ವಿಜ್ಞಾನವನ್ನು ಪ್ರಾಯೋಗಿಕ ತರಬೇತಿಯ ಮೂಲಕ ಕಲಿಸಿ ಇದೆಲ್ಲದರ ಮುಖಾಂತರ ಶಿಕ್ಷಣವನ್ನು ನೀಡುವುದೇ ಇದಕ್ಕಿರುವ ನಿಜವಾದ ಪರಿಹಾರ. ವಿವಿಧ ಬಗೆಯ ಹತ್ತಿಯ ಕುರಿತಾದ ಜ್ಞಾನ, ಭಾರತದ ವಿವಿಧ ಪ್ರಾಂತ್ಯಗಳಲ್ಲಿನ ಮಣ್ಣು, ಕರಕುಶಲ ಕಲೆಯ ಅವನತಿಯ ಇತಿಹಾಸ, ಅದರ ರಾಜಕೀಯ ಕಾರಣಗಳು – ಇದರಲ್ಲಿ ಬ್ರಿಟಿಷರ ಆಳ್ವಿಕೆಯ ಇತಿಹಾಸವೂ ಸೇರುತ್ತದೆ – ಅಂಕಗಣಿತದ ತಿಳಿವಳಿಕೆ ಇವೆಲ್ಲವೂ ತಕಲಿಯನ್ನು ತಿರುಗಿಸುವುದನ್ನುಕಲಿಸಲು ಬೇಕಿರುವ ಪೂರ್ವಜ್ಞಾನದೊಳಗೇ ಬರುತ್ತವೆ. ಈ ಪ್ರಯೋಗವನ್ನು ಅವರು ತಮ್ಮ ಮೊಮ್ಮಗನೊಡನೆ ಮಾಡಿದ್ದರು. ಆಗ ಯಾರೋ ತನಗೆ ಬೋಧನೆ ಮಾಡುತ್ತಿದ್ದಾರೆ ಎನ್ನುವ ಭಾವನೆಯೇ ಆ ಹುಡುಗನಿಗೆ ಬರುತ್ತಿರಲಿಲ್ಲ. ಏಕೆಂದರೆ ಇಡೀ ಸಮಯ ಅವನು ಆಡುತ್ತಾ, ನಗುತ್ತಾ ಮತ್ತು ಹಾಡುತ್ತಾ ಇರುತ್ತಿದ್ದ.

ಗಾಂಧೀಜಿಯವರು ತಕಲಿಯ ಬಗ್ಗೆ ಹೆಚ್ಚು ಆಸ್ಥೆ ವಹಿಸಿದ್ದರಿಂದ ಮತ್ತು ಅದರ ವಿಶಿಷ್ಟ ಸಾಮರ್ಥ್ಯವನ್ನು ತಿಳಿದಿದ್ದರಿಂದ ಹಾಗೂ ಅದರ ಬಗ್ಗೆಯೇ ಪ್ರಶ್ನೆಗಳು ಮೂಡಲಿ ಎನ್ನುವ ಕಾಳಜಿಯಿಂದ ಅವರು ತಕಲಿಯ ಬಗ್ಗೆ ವಿಶೇಷವಾಗಿ ಪ್ರಸ್ತಾಪಿಸಿದ್ದರು. ಇದಕ್ಕೆ ಬೇರೊಂದು ಕಾರಣವೂ ಇದ್ದಿತು. ಬಟ್ಟೆಯನ್ನು ತಯಾರಿಸುವ ಕೌಶಲವನ್ನು ಮಾತ್ರ ಸಾರ್ವತ್ರಿಕವಾಗಿ ಕಲಿಸುವ ಸಾಧ್ಯತೆಯಿದ್ದಿತು. ಅಲ್ಲದೆ ತಕಲಿಗೆ ಏನೇನೂ ಖರ್ಚಿರಲಿಲ್ಲ. ಅದರ ಮಹತ್ವವು ಎಲ್ಲರಿಗೂ ತಿಳಿದಿತ್ತು. ಅದರ

"ರಚನಾತ್ಮಕ ಕಾರ್ಯಕ್ರಮ" ದ ಅನುಷ್ಠಾನದ ವ್ಯಾಪ್ತಿಯನ್ನು ಆಧರಿಸಿ, ಕಾಂಗ್ರೆಸ್ ಏಳು ಪ್ರಾಂತ್ಯಗಳಲ್ಲಿ ಅಧಿಕಾರಕ್ಕೆ ಬಂದಿತು ಮತ್ತು ಅದರ ಯಶಸ್ಸು ಸಹ ನಮ್ಮ ಕೈಯಲ್ಲಿಯೇ ಇರುತ್ತದೆ.

ಅವರು ಏಳು ವರ್ಷದ ಕೋರ್ಸನ್ನು ಯೋಜಿಸಿದ್ದರು ಮತ್ತು ಅದರಲ್ಲಿ ಬಳಸಿದ ತಕಲಿಯ ದೆಸೆಯಿಂದ,ಕೊನೆಯ ಹಂತದ ಹೊತ್ತಿಗೆ ನೇಯುವ, ಬಣ್ಣ ಹಾಕುವ ಮತ್ತು ಬಟ್ಟೆ ವಿನ್ಯಾಸಗೊಳಿಸುವ ಪ್ರಾಯೋಗಿಕ ಕೌಶಲದಲ್ಲಿ ಪರ್ಯವಸಾನಗೊಳ್ಳಬೇಕಾಗಿತ್ತು. ಈ ಕಾರ್ಯಕ್ಕೆ ಅಗತ್ಯ ವಿವರಗಳೆಲ್ಲವೂ ಲಭ್ಯವಿದ್ದವು. ವಿದ್ಯಾರ್ಥಿಗಳ ಪರಿಶ್ರಮದ ಫಲವಾದ ಸರಕುಗಳಿಂದ ಶಿಕ್ಷಕರ ವೇತನ ಇತ್ಯಾದಿ ವೆಚ್ಚವನ್ನು ಪಡೆಯಬೇಕೆನ್ನುವ ವಿಷಯದಲ್ಲಿ ಅವರು ಅತ್ಯಂತ ಉತ್ಸುಕರಾಗಿದ್ದರು. ಏಕೆಂದರೆ ನಮ್ಮ ನಾಡಿನ ಕೋಟ್ಯಂತರ ಮಕ್ಕಳ ಶಿಕ್ಷಣ ಯೋಜನೆಗೆ ಬೇರಾವುದೂ ಮಾರ್ಗವಿಲ್ಲವೆಂದು ಅವರಿಗೆ ಮನವರಿಕೆಯಾಗಿತ್ತು. ನಮಗೆ ಅಗತ್ಯವಿರುವಷ್ಟು ಆದಾಯ ದೊರೆಯುವವರೆಗೆ, ವೈಸ್ ರಾಯ್ ಅವರು ಮಿಲಿಟರಿ ಖರ್ಚನ್ನು ಕಡಿತಗೊಳಿಸಲು ಅಥವಾ ಅಂಥ ಘಟನೆಗಳಿಗೆ ಕಾಯಲು ಸಾಧ್ಯವಿಲ್ಲವೆಂದು ನಂಬಿದ್ದರು. ಈ ಪ್ರಾಥಮಿಕ ಶಿಕ್ಷಣವು ನೈರ್ಮಲ್ಯ, ಆರೋಗ್ಯ, ಪೌಷ್ಟಿಕತೆ, ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುವುದು, ಮನೆಯಲ್ಲಿ ಪಾಲಕರಿಗೆ ಸಹಾಯ ಮಾಡುವುದು ಇತ್ಯಾದಿಯನ್ನೂ ಒಳಗೊಂಡಿರುವುದನ್ನು ನೆನಪಿಡಬೇಕೆಂದು ಅವರು ಹೇಳುತ್ತಿದ್ದರು. ಪ್ರಸಕ್ತ ಪೀಳಿಗೆಯ ಬಾಲಕರಿಗೆ ಶುಚಿತ್ವವಾಗಲೀ ಸ್ವಸಹಾಯವಾಗಲೀ ತಿಳಿದಿರಲಿಲ್ಲ ಹಾಗೂ ಅವರು ದೈಹಿಕವಾಗಿ ದುರ್ಬಲರಾಗಿದ್ದರು. ಹಾಗಾಗಿ ಅವರಿಗೆ ಸಂಗೀತ ಮತ್ತು ಡ್ರಿಲ್ ಇತ್ಯಾದಿ ಮೂಲಕ ಕಡ್ಡಾಯ ದೈಹಿಕ ತರಬೇತಿಯನ್ನು ನೀಡಬೇಕೆಂದು ಯೋಜಿಸಿದ್ದರು.

## ಇರುವುದೊಂದೇ ದಾರಿ

ಅಕ್ಷರ ಕಲಿಕೆಯ ವಿರೋಧಿ ಎನ್ನುವ ಆರೋಪವೂ ಗಾಂಧೀಜಿಯವರ ಮೇಲೆ ಬಂದಿತ್ತು. ಇದರಲ್ಲಿ ಎಳ್ಳಷ್ಟೂಸತ್ಯಾಂಶವಿರಲಿಲ್ಲ. ಅವರು ತೋರಿಸಲು ಹೊರಟದ್ದು ಅದನ್ನು ಯಾವ ವಿಧಾನದಲ್ಲಿ ನೀಡಬಹುದು ಎಂದು ಮಾತ್ರ. ಶಾಲೆಗಳ ಸ್ವಯಂ–ಪೋಷಣೆಯ ಚಿಂತನೆಯೂ ಕೂಡ ತೀವ್ರ ಟೀಕೆಗೆ ಒಳಗಾಯಿತು. ನಾವು ಪ್ರಾಥಮಿಕ ಶಿಕ್ಷಣಕ್ಕೆ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಬೇಕು ಎನ್ನುವ ವಾದದೊಟ್ಟಿಗೆ, ಈ ಮಾರ್ಗದಲ್ಲಿ ಹೋದರೆ ಮಕ್ಕಳನ್ನು ಶೋಷಿಸುತ್ತೇವೆ ಎನ್ನುವ ಒಡಕು ದನಿಯೂ ಕೇಳಿಬಂತು. ಅಲ್ಲದೆ ಹಣ ಸಿಕ್ಕಾಪಟ್ಟೆ ಪೋಲಾಗುತ್ತದೆ ಎಂದು ಭಯಪಟ್ಟವರೂ ಇದ್ದರು. ಈ ಭಯಕ್ಕೆ ಅನುಭವವೇ ತಕ್ಕ ಪ್ರತ್ಯುತ್ತರ ಕೊಟ್ಟಿತು. ಮಕ್ಕಳ ಶೋಷಣೆ ಅಥವಾ ಅವರ ಮೇಲೆ ಹೊರೆಯೊಂದನ್ನು ಹೊರಿಸುವ ವಿಷಯಕ್ಕೆ ಸಂಬಂಧಿಸಿದಂತೆ ಮಕ್ಕಳನ್ನು ದೊಡ್ಡ ಅನಾಹುತದಿಂದ ಪಾರು ಮಾಡಿದರೆ ಆಗ ಅವರ ಮೇಲೆ ಹೊರೆ ಹೊರಿಸುವ ಪ್ರಶ್ನೆ ಬರುವುದಿಲ್ಲ ಎನ್ನುವ ಪ್ರತಿಕ್ರಿಯೆ ಬಂದಿತು, ಆಡಲು ತಕಲಿಯು ಉತ್ತಮ ಆಟಿಗೆಯಾಗಿದೆ. ಅದು ಉತ್ಪಾದನೆಗೆ ಸಹಾಯಕ ಆಟಿಗೆಯಾಗಿರುವ ಕಾರಣದಿಂದಾಗಿ ಅದು ಕಡಿಮೆ ದರ್ಜೆಯ ಆಟಿಗೆಯೇನೂ ಆಗಿಬಿಡುವುದಿಲ್ಲ. ಮಕ್ಕಳು ಪಾಲಕರಿಗೆ ಸಹಾಯ ಮಾಡುವ ರೂಢಿ ಈ ಮೊದಲೂ ಇದ್ದಿತು. ತಮ್ಮ ಪಾಲಕರ ಜೊತೆಗೂಡಿ ಹೊಲಗಳಲ್ಲಿ ಕೆಲಸ ಮಾಡಿದ್ದ ಕಾರಣದಿಂದಾಗಿ ಸೇವಾಗ್ರಾಮದ ಮಕ್ಕಳಿಗೆ ಕೃಷಿ ಸಂಬಂಧಿತ ಕೆಲಸಗಳು ಗಾಂಧೀಜಿಯವರಿಗಿಂತಲೂ ಚೆನ್ನಾಗಿ ತಿಳಿದಿದ್ದವು. ಮಗು ನೂಲುವುದನ್ನು ಹಾಗೂ ಕೃಷಿಯಲ್ಲಿ ಪಾಲಕರಿಗೆ ಸಹಾಯ ಮಾಡುವುದನ್ನು ಉತ್ತೇಜಿಸುತ್ತಲೇ ಆ ಮಗುವನ್ನು ಕೇವಲ ತನ್ನ ಕುಟುಂಬವೊಂದಕ್ಕೆ ಮಾತ್ರ ಸೇರಿದವನೆಂದು ಭಾವಿಸುವಂತೆ ಮಾಡಬಾರದು. ಬದಲಾಗಿ, ಅವನು ತನ್ನ ಹಳ್ಳಿ ಮತ್ತು ತನ್ನ ದೇಶಕ್ಕೆ

ಸೇರಿದವನೆಂದು ಭಾವಿಸಲು ಅನುವು ಮಾಡಬೇಕು ಮತ್ತು ತನ್ನ ಕೊಡುಗೆಯನ್ನು ನೀಡಲು ಉತ್ತೇಜನ ನೀಡಬೇಕು. ಇರುವುದು ಅದೊಂದೇ ದಾರಿ. ಮಕ್ಕಳಿಗೆ ಶಿಕ್ಷಣವನ್ನು ಪುಕ್ಕಟೆಯಾಗಿ ನೀಡುವುದರಿಂದ ನೀವು ಅವರನ್ನು ದುರ್ಬಲರನ್ನಾಗಿ ಮಾಡುತ್ತೀರಿ ಎಂದೂ ಮಕ್ಕಳು ತಮ್ಮ ಶಿಕ್ಷಣದ ಖರ್ಚನ್ನು ತಮ್ಮ ಪರಿಶ್ರಮದ ಮೂಲಕ ಪಾವತಿಸಲು ಸಾಧ್ಯವಾದರೆ ಆಗ ಅವರು ಆತ್ಮವಿಶ್ವಾಸ ತುಂಬಿದ ಧೈರ್ಯವಂತರಾಗಿ ರೂಪುಗೊಳ್ಳುತ್ತಾರೆಎಂದೂ ಅವರು ಸಚಿವರಿಗೆ ಹೇಳುತ್ತಿದ್ದರು..

ಈ ವ್ಯವಸ್ಥೆಯು– ಹಿಂದುಗಳು, ಮುಸ್ಲಿಮರು, ಪಾರ್ಸಿಗಳು ಮತ್ತು ಕ್ರಿಶ್ಚಿಯನ್ನರು – ಎಲ್ಲರಿಗೂ ಸಾಮಾನ್ಯವಾಗಿತ್ತು. ಧಾರ್ಮಿಕ ಶಿಕ್ಷಣಕ್ಕೆ ಒತ್ತನ್ನು ಏಕೆ ನೀಡಿಲ್ಲವೆಂದು ಅವರನ್ನು ಕೇಳಲಾಯಿತು. ಏಕೆಂದರೆ ಅವರಿಗೆ ಕಲಿಸಲಾಗುತ್ತಿರುವುದು ಪ್ರಾಯೋಗಿಕ ಧರ್ಮ – ಸ್ವಸಹಾಯದ ಧರ್ಮ.

## ಸೇವಾ ನಿಯೋಜನೆಗೆಕಡ್ಡಾಯ ನೋಂದಣಿ

ಈ ರೀತಿಯಲ್ಲಿ ತರಬೇತಿ ಪಡೆದ ಎಲ್ಲರಿಗೂ, ಅವರಿಗೆ ಬೇಕೆನಿಸಿದರೆ ಉದ್ಯೋಗವನ್ನು ಹುಡುಕಿಕೊಡುವುದು ಸರಕಾರದ ಜವಾಬ್ದಾರಿಯೆಂದು ಗಾಂಧೀಜಿಯವರು ಹೇಳಿದರು. ಶಿಕ್ಷಕರಿಗಾಗಿ ಕಡ್ಡಾಯ ಸೇವಾ ನಿಯೋಜನೆಯನ್ನು ಮಾಡಬೇಕೆನ್ನುವುದು ಪ್ರೊ. ಶಾ ಅವರ ಸಲಹೆಯಾಗಿತ್ತು. ಅದರ ಅಗತ್ಯವನ್ನು ವಿಶದಪಡಿಸಲು ಅವರು ಇಟಲಿ ಮತ್ತಿತರ ದೇಶಗಳ ಉದಾಹರಣೆಯನ್ನು ನೀಡಿದ್ದರು. ಮಾತೃಭೂಮಿಯ ಸೇವೆಗೆ ಇಟಲಿ ದೇಶದ ಯುವಕರನ್ನು ಪ್ರೇರೇಪಿಸಲು ಮುಸಲೋನಿಗೆ ಸಾಧ್ಯವಾಯಿತು ಎನ್ನುವುದಾದರೆ ನಾವೇಕೆ ಹಾಗೆ ಮಾಡಬಾರದು? ಯುವಕರು ತಮ್ಮ ವೃತ್ತಿಜೀವನವನ್ನು ಪ್ರಾರಂಭಿಸುವ ಹಂತದಲ್ಲಿ ಒಂದು ಅಥವಾ ಎರಡು ವರ್ಷಗಳ ಅವಧಿಯ ಕಡ್ಡಾಯ ನಿಯೋಜನೆಯನ್ನು ಗುಲಾಮಿತನ ಎಂದೇಕೆ ಅವರು ಪರಿಭಾವಿಸಬೇಕು? ಕಳೆದ 17 ವರ್ಷಗಳಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಯುವಜನತೆ ಸಾಕಷ್ಟು ಮಹತ್ತರ ಕೊಡುಗೆಗಳನ್ನು ನೀಡಿದೆ.ಅದರೊಂದಿಗೆ ಇನ್ನೂ ಒಂದು ವರ್ಷ ನೀಡಬೇಕೆಂದು ಕರೆಕೊಡುತ್ತೇನೆ ಎಂದು ಹೇಳಿದರು. ಇದಕ್ಕೆ ಸಂಬಂಧಿಸಿದಂತೆ ಕಾಯಿದೆಯೇನಾದರೂ ಬೇಕಿದ್ದರೆ ಆಗ ಈ ಸೇವೆಯನ್ನು ಕಡ್ಡಾಯ ಮಾಡಲಾಗದು; ಏಕೆಂದರೆ ನಮ್ಮ ಪ್ರತಿನಿಧಿಗಳಿಂದ ಬಹುಮತ ದೊರೆಯದೆ ಅಂಥ ನಿರ್ಣಯವನ್ನು ಅಂಗೀಕಾರ ಮಾಡಲಾಗುವುದಿಲ್ಲ.

ಹಾಗಾಗಿ, ಈ ವಿಧಾನದಲ್ಲಿ ದೈಹಿಕ ಪರಿಶ್ರಮದ ಮೂಲಕ ಶಿಕ್ಷಣ ನೀಡುವುದು ನಿಮಗೆ ಒಪ್ಪಿಗೆಯೇ? ಎಂದು ಅವರನ್ನು ಕೇಳಲು ಗಾಂಧೀಜಿಯವರು ಬಯಸಿದರು. ಶಾಲಾಶಿಕ್ಷಣವನ್ನು ಸ್ವಯಂ–ಪೋಷಣೆಯ ರೀತಿಯಲ್ಲಿ ಯೋಜಿಸುವುದು ಅವರಿಗೆ ಕಾರ್ಯಕ್ಷಮತೆಯ ಸತ್ವಪರೀಕ್ಷೆಯಾಗಿತ್ತು. ಏಳು ವರ್ಷಗಳ ಶಿಕ್ಷಣದ ಕೊನೆಯ ವೇಳೆಗೆ ಮಕ್ಕಳು ತಮ್ಮ ಶಿಕ್ಷಣದ ಖರ್ಚನ್ನು ತಮ್ಮ ಗಳಿಕೆಯಿಂದಲೇ ಪಾವತಿಸಬೇಕೆನ್ನುವ ಇರಾದೆಯಿತ್ತು.

ಕಾಲೇಜು ಶಿಕ್ಷಣವು ಹೆಚ್ಚಾಗಿ ನಗರ ಕೇಂದ್ರಿತವಾಗಿದೆ. ಪ್ರಾಥಮಿಕ ಶಿಕ್ಷಣದಂತೆ ಸಂಪೂರ್ಣವಾಗಿ ವಿಫಲವಾಗಿದೆಯೆಂದು ಹೇಳಲಾಗದಿದ್ದರೂ ಅಲ್ಲಿಯ ಫಲಶ್ರುತಿ ಸಹ ನಿರಾಸೆ ಹುಟ್ಟಿಸುತ್ತದೆ. ಅಲ್ಲಿಂದ ಹೊರಬಂದ ಯಾವುದೇ ಪದವೀಧರನಾಗಿರಲಿ, ಆತನೇಕೆ ನಿರುದ್ಯೋಗಿಯಾಗಿರಬೇಕು?

ತಕಲಿಯನ್ನು ಅವರು ಒಂದು ನಿಶ್ಚಿತ ಉದಾಹರಣೆಯಾಗಿ ಪ್ರತಿಪಾದಿಸಿದ ಕಾರಣವೆಂದರೆ ಅಚಾರ್ಯ ವಿನೋಬಾ ಭಾವೆಯವರು ಆ ವಿಷಯದಲ್ಲಿ ಅಗಾಧ ಪ್ರಾಯೋಗಿಕ, ಕಾರ್ಯನಿರತ ಅನುಭವವನ್ನು ಹೊಂದಿದ್ದರು ಮತ್ತು ಅಲ್ಲಿ

ಬರಬಹುದಾದ ಯಾವುದೇ ಪ್ರಶ್ನೆಗಳಿಗೆ ಉತ್ತರ ನೀಡಲು ಉಪಸ್ಥಿತರಿದ್ದರು. ಕಾಕಾಸಾಹೇಬ್ ಅವರೂ ಕೂಡ ಈ ವಿಚಾರದಲ್ಲಿ ಮಾತನಾಡಲು ಸಾಧ್ಯವಿತ್ತಾದರೂ ಅವರ ಅನುಭವವು ಪ್ರಾಯೋಗಿಕಕ್ಕಿಂತಲೂ ಹೆಚ್ಚಾಗಿ ಸೈದ್ಧಾಂತಿಕವಾಗಿತ್ತು. ಅವರು ಆರ್ಮ್‌ಸ್ಟ್ರಾಂಗ್‌ನ "Education for life" ಪುಸ್ತಕದ "Education by Hand" ಅಧ್ಯಾಯದ ಕುರಿತಾಗಿ ಗಾಂಧೀಜಿಯವರ ಗಮನವನ್ನು ವಿಶೇಷವಾಗಿ ಸೆಳೆದಿದ್ದರು. ದಿ.ಮಧುಸೂದನ ದಾಸ್ ಅವರು ವೃತ್ತಿಯಲ್ಲಿ ವಕೀಲರಾಗಿದ್ದರು ಆದರೆ ನಮ್ಮ ಕೈಗಳನ್ನು, ಕಾಲುಗಳನ್ನು ಉಪಯೋಗಿಸದೇ ಇದ್ದರೆ ಮಿದುಳಿನ ಬೆಳವಣಿಗೆ ಆಗುವುದಿಲ್ಲವೆಂದು ಅವರಿಗೆ ಮನದಟ್ಟಾಗಿತ್ತು. ಅಕಸ್ಮಾತ್ ಅದು ಕೆಲಸ ಮಾಡಿದರೂ ಅದು ಸೈತಾನನ ಮನೆಯಂತಿರುತ್ತದೆಯೆನ್ನುವುದು ಅವರ ಅಭಿಪ್ರಾಯವಾಗಿತ್ತು. ಇದೇ ಪಾಠವನ್ನು ಟಾಲ್‌ಸ್ಟಾಯ್ ಅವರು ತಮ್ಮ ಅನೇಕ ಕತೆಗಳ ಮೂಲಕ ಹೇಳಿದ್ದರು.

## ಅಹಿಂಸಾಧಾರಿತ

ಪ್ರಾಥಮಿಕ ಶಿಕ್ಷಣವನ್ನು ಸ್ವಯಂಪೋಷಿತವನ್ನಾಗಿ ಮಾಡಬೇಕೆನ್ನುವ ಅವರ ಯೋಜನೆಯ ಮೂಲಭೂತ ಅಂಶಗಳ ಕಡೆಗೆ ಗಾಂಧೀಜಿಯವರು ಸಭಿಕರ ಗಮನವನ್ನು ಸೆಳೆದು ತಮ್ಮ ಮಾತುಗಳನ್ನು ಮುಕ್ತಾಯಗೊಳಿಸಿದರು: "ನಮ್ಮಲ್ಲಿ ಕೋಮುಗಲಭೆಗಳಿರುವುದು ಹೌದು. ಆದರೆ ಅದು ಕೇವಲ ನಮ್ಮ ದೇಶಕ್ಕೆ ವಿಶಿಷ್ಟವಾಗಿದೆಯೆಂದೇನೂ ಅಲ್ಲ. ಈ ಹಿಂದೆ ಇಂಗ್ಲೆಂಡಿನಲ್ಲಿ ವಾರ್ಸ್ ಆಫ್ ರೋಸಸ್ ಇದ್ದಿತು ಮತ್ತು ಇಂದು ಬ್ರಿಟಿಶ್ ಸಾಮ್ರಾಜ್ಯವಾದವು ಇಡೀ ಜಗತ್ತಿನ ವೈರಿಯಾಗಿದೆ. ನಾವು ಕೋಮುಗಲಭೆ ಹಾಗೂ ಅಂತಾರಾಷ್ಟ್ರೀಯ ಬಿಕ್ಕಟ್ಟುಗಳನ್ನು ನಿವಾರಿಸಬೇಕೆಂದರೆ, ನಮ್ಮ ಯುವಪೀಳಿಗೆಯನ್ನು ಬೆಳೆಸಲು ನಾನು ಸ್ಥೂಲವಾಗಿ ಪ್ರಸ್ತಾಪಿಸಿರುವ ಶಿಕ್ಷಣದಂತಹ ಶುದ್ಧ ಮತ್ತು ಸಮರ್ಥ ಬುನಾದಿಯಿಂದಲೇ ಪ್ರಾರಂಭಿಸಬೇಕು. ಆ ಯೋಜನೆಯು ಅಹಿಂಸೆಯಿಂದಲೇ ಜನ್ಮತಾಳಿದೆ. ದೇಶದಲ್ಲಿ ಮದ್ಯನಿಷೇಧವನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸುವ ಸಂಬಂಧವಾಗಿ ನಾನು ಈ ಸಲಹೆಯನ್ನು ನೀಡಿದ್ದೆ. ಈಗ ನಾನು ಹೇಳುವುದೇನೆಂದರೆ, ವರಮಾನದಲ್ಲಿ ಕೊರತೆಯಾಗದಿದ್ದರೂ, ರಾಜ್ಯದ ಬೊಕ್ಕಸವು ತುಂಬಿದೆಯೆಂದು ಭಾವಿಸಿದರೂ ಸಹ ನಾವು ನಮ್ಮ ಮಕ್ಕಳನ್ನು ನಗರಗಳಿಂದ ವಿಮುಖರನ್ನಾಗಿ ಮಾಡಲು ಈ ಬಗೆಯ ಶಿಕ್ಷಣವು ಅತ್ಯಗತ್ಯವಾಗಿದೆ. ನಾವು ಅವರನ್ನು ನಮ್ಮ ಸಂಸ್ಕೃತಿಯ, ನಾಗರೀಕತೆಯ, ನಮ್ಮ ದೇಶದ ನೈಜ ಪ್ರತಿನಿಧಿಗಳನ್ನಾಗಿ ರೂಪುಗೊಳಿಸಬೇಕಾಗಿದೆ. ಸ್ವಯಂ – ಪೋಷಿತ ಪ್ರಾಥಮಿಕ ಶಿಕ್ಷಣದ ಕೋರ್ಸನ್ನು ಅವರಿಗೆ ನೀಡುವುದರ ಹೊರತಾಗಿ ಇದನ್ನು ಸಾಧಿಸುವ ಅನ್ಯ ಮಾರ್ಗಗಳೇ ಇಲ್ಲ.ಯುರೋಪ್ ದೇಶಗಳು ನಮಗೆ ಮಾದರಿಯಾಗಲಾರವು. ಅದು ತನ್ನ ಯೋಜನೆಗಳನ್ನು ಹಿಂಸೆಯನ್ನಾಧರಿಸಿ ರೂಪಿಸುತ್ತದೆ. ಏಕೆಂದರೆ ಅವು ಹಿಂಸೆಯನ್ನೇ ನಂಬುತ್ತವೆ. ರಷ್ಯಾದ ಸಾಧನೆಗಳನ್ನು ನಾನು ಅವಗಣನೆ ಮಾಡುತ್ತಿಲ್ಲವಾದರೂ ಅದೆಲ್ಲವನ್ನೂ ಬಲವಂತವಾಗಿ ಮತ್ತು ಹಿಂಸೆಯಿಂದ ಮಾಡಲಾಗಿದೆ. ಭಾರತವು ಹಿಂಸೆಯಿಂದ ದೂರವುಳಿಯಬೇಕೆಂದು ಸಂಕಲ್ಪಿಸಿದ್ದರೆ ಈ ಶಿಕ್ಷಣ ಪದ್ಧತಿಯು,ನಾವು ಸಾಗಬೇಕಾದ ಹಾದಿಯ ಅವಿಭಾಜ್ಯ ಭಾಗವೇ ಆಗಿದೆ. ಇಂಗ್ಲೆಂಡ್ ದೇಶವು ಶಿಕ್ಷಣಕ್ಕಾಗಿ ಲಕ್ಷ ಲಕ್ಷ ಹಣವನ್ನು ಸುರಿಯುತ್ತದೆ ಎಂದು ಹೇಳುತ್ತಾರೆ. ಅಮೆರಿಕಾ ದೇಶವೂ ಹಾಗೆಯೇ ಮಾಡುತ್ತದೆ. ಆದರೆ ಈ ಹಣವೆಲ್ಲವೂ ಶೋಷಣೆಯಿಂದ ಸಂಪಾದಿಸಿದ್ದು ಎನ್ನುವುದನ್ನು ನಾವು ಮರೆತುಬಿಡುತ್ತೇವೆ. ಅವರು ಶೋಷಣೆಯ ಕಲೆಯನ್ನು ವಿಜ್ಞಾನವನ್ನಾಗಿ ಪರಿವರ್ತಿಸಿದ್ದಾರೆ ಹಾಗೂ ಈಗ ಅವರ ಮಕ್ಕಳಿಗೆ ಕೊಡುತ್ತಿರುವ ಶಿಕ್ಷಣವನ್ನೇ ಮುಂದುವರಿಸಿಕೊಂಡು ಹೋಗಲೂಬಹುದು. ಆದರೆ ನಾವು ಶೋಷಣೆಯನ್ನು ಒಪ್ಪಿಕೊಳ್ಳಲಾಗುವುದಿಲ್ಲ ಮತ್ತು ಯಾವುದೇ ಕಾರಣಕ್ಕೂ ಒಪ್ಪಿಕೊಳ್ಳುವುದಿಲ್ಲ. ಅಹಿಂಸೆಯನ್ನೇ ಆಧರಿಸಿದ ಈ ಬಗೆಯ ಶಿಕ್ಷಣವಲ್ಲದೆ ನಮಗೆ ಬೇರಾವ ಆಯ್ಕೆಗಳೂ ಇಲ್ಲ."

ಹರಿಜನ್ 30–10–37

## 9

## ಯಂತ್ರಯುಗ

ಅಪರಾಹ್ನದ ಅವಧಿಯಲ್ಲಿ ಗಾಂಧೀಜಿಯವರು ಕೆಲವು ಟೀಕೆಗಳಿಗೆ ಉತ್ತರಿಸುವ ಮೂಲಕ ಸಭೆಯನ್ನು ಪ್ರಾರಂಭಿಸಿದರು. ಸಾಧನವೆಂದರೆತಕಲಿ ಮಾತ್ರವಲ್ಲ ಆದರೆ ಅದನ್ನು ಮಾತ್ರ ಸಾರ್ವತ್ರೀಕರಣಗೊಳಿಸಲು ಸಾಧ್ಯವಿತ್ತು. ಇದಲ್ಲದೆ ಕಾಗದ ತಯಾರಿಕೆ, ಪಾಮ್ ಮರಗಳಿಂದ ಬೆಲ್ಲ ತಯಾರಿಕೆ ಇತ್ಯಾದಿ. ಯಾವ ಶಾಲೆಗೆ ಯಾವ ಕರಕುಶಲಕಲೆ ಅತ್ಯುತ್ತಮವಾಗಿ ಹೊಂದುತ್ತದೆಂದು ನಿರ್ಧರಿಸುವುದು ಸಚಿವರ ಹೊಣೆಗಾರಿಕೆಯಾಗಿತ್ತು. ಯಂತ್ರಗಳಿಗೇ ಒತ್ತು ನೀಡಿದರೆ ಮುಂದೆ ಮಾನವರೇ ಯಂತ್ರಗಳಂತೆ ಆಗುವ ಅಪಾಯ ಇರುತ್ತದೆಂದು ಯಂತ್ರಗಳಿಂದ ಮಂತ್ರಮುಗ್ಧರಾದವರಿಗೆ ಅವರು ಎಚ್ಚರಿಕೆ ನೀಡುತ್ತಿದ್ದರು. ಯಂತ್ರಯುಗದಲ್ಲಿ ಬದುಕಲು ಬಯಸುವವರಿಗೆ ಗಾಂಧೀಜಿಯವರ ಯೋಜನೆ ಯಾವ ಪ್ರಯೋಜನಕ್ಕೂ ಬರುತ್ತಿರಲಿಲ್ಲ. ಯಂತ್ರಗಳನ್ನು ಬಳಸಿಕೊಂಡು ಹಳ್ಳಿಗರಿಗೆ ಬದುಕುವ ದಾರಿಯನ್ನು ಮಾಡಿಕೊಡಲು ಸಾಧ್ಯವಿಲ್ಲ ಎಂದು ಅವರು ಯಾವಾಗಲೂ ಹೇಳುತ್ತಿದ್ದರು. 30 ಕೋಟಿ ಜೀವಂತ ಯಂತ್ರಗಳು ನಮ್ಮ ಜೊತೆಯಿರುವಾಗ ಕೆಲವು ಮೃತ ಯಂತ್ರಗಳನ್ನು ತರುವುದು ನಮ್ಮ ಸೋಮಾರಿತನವನ್ನು ತೋರಿಸುತ್ತದೆ ಎಂದವರು ಹೇಳುತ್ತಲಿದ್ದರು. ಸೈದ್ಧಾಂತಿಕ ಹಿನ್ನೆಲೆಯೇನೇ ಇರಲಿ, ಈ ಯೋಜನೆಯು ಶೈಕ್ಷಣಿಕವಾಗಿ ಸಮರ್ಪಕವಾಗಿದೆಯೆಂದು ಡಾ. ಝಾಕಿರ್ ಹುಸೇನ್ ಅವರು ಹೇಳಿದ್ದು ಸರಿಯಿರಲಿಲ್ಲ. ಈ ಯೋಜನೆಯ ವಿಧಾನವನ್ನು ತಿಳಿದಿದ್ದ ಒಬ್ಬ ಮಹಿಳೆಯು ಒಮ್ಮೆ ಗಾಂಧೀಜಿಯವರನ್ನು ಭೇಟಿ ಮಾಡಲು ಹೋಗಿದ್ದಾಗ ಇಲ್ಲಿ ಗಾಂಧೀಜಿಯವರ ಪರಿಕಲ್ಪನೆಗೂ ಮತ್ತು ಯೋಜನೆಯ ವಿಧಾನಕ್ಕೂ ತುಂಬ ಅಂತರವಿದೆಯೆಂದು ಅವರಿಗೆ ಹೇಳಿದ್ದಳು. ಆದರೆ ಸಂಪೂರ್ಣ ವಿಶ್ವಾಸ ಮೂಡುವವರೆಗೂ ಈ ಯೋಜನೆಯನ್ನು ಒಪ್ಪಿಕೊಳ್ಳಬಾರದೆಂದು ಅವರು ಹೇಳಿದ್ದರು. ಇದನ್ನು ಸರಿಯಾಗಿ ನಿರ್ವಹಿಸಿದರೆ ಈ ಶಾಲೆಗಳಿಂದ ಹೊರಬರುವವರು ಗುಲಾಮರಲ್ಲ ; ಅತ್ಯುತ್ತಮ ಕುಶಲಕರ್ಮಿಗಳು ಎಂದು ಅವರು ಹೇಳಿದ್ದರು. ಮಕ್ಕಳಿಂದ ಪಡೆದ ದೈಹಿಕ ಶ್ರಮಕ್ಕೆ ಸೂಕ್ತಮೌಲ್ಯವು ಒಂದು ಗಂಟೆಗೆ ಎರಡು ಪೈಸೆ ಎಂದವರು ಹೇಳಿದ್ದರು.

ಆದರೆ ಯಾರೂ ತಮ್ಮ ಮೇಲಿರುವ ಗೌರವದ ಭಾವನೆಯ ಕಾರಣದಿಂದ ತಮ್ಮ ಚಿಂತನೆಗಳನ್ನು ಒಪ್ಪಬಾರದು ಎಂದು ಅವರು ಈ ಸಂದರ್ಭದಲ್ಲಿ ಎಚ್ಚರಿಸಿದ್ದರು ಮತ್ತು ಜನರ ಮೇಲೆ ತಮ್ಮ ನಂಬಿಕೆಗಳನ್ನು ಹೇರುವುದನ್ನು ಅವರು ಕನಸಿನಲ್ಲಿಯೂ ಯೋಚಿಸುತ್ತಿರಲಿಲ್ಲ. ಈ ಯೋಜನೆಯನ್ನು ಸಂಪೂರ್ಣ ಮತ್ತು ಪ್ರಬುದ್ಧ ಪರಿಶೀಲನೆಯ ತರುವಾಯ ಒಪ್ಪಿಕೊಳ್ಳಬೇಕು; ಆಗ ಅದನ್ನು ಸ್ವಲ್ಪ ಕಾಲದ ಅನುಷ್ಠಾನದ ನಂತರ ಕೈಬಿಡುವ ಪ್ರಸಂಗ ಬರುವುದಿಲ್ಲ. ತಮ್ಮಲ್ಲಿರುವ ನಿರುದ್ಯೋಗಿಗಳಿಗೆ ಉದ್ಯೋಗ ಒದಗಿಸದ ಸರಕಾರವು ಯೋಗ್ಯತೆ ಇಲ್ಲದ್ದು ಎಂದ ಪ್ರೊ. ಶಾ ಅವರ ಮಾತಿಗೆ ಸಹಮತ ವ್ಯಕ್ತಪಡಿಸಿದ್ದರು. ಆದರೆ ಕೇವಲ ಧರ್ಮಾರ್ಥವಾಗಿ ಏನೋ ಭತ್ಯೆ ಕೊಡುವುದು ನಿರುದ್ಯೋಗ ಸಮಸ್ಯೆಗೆ ಪರಿಹಾರವಲ್ಲ. ಅವರು ಪ್ರತಿಯೊಬ್ಬರಿಗೂ ಕೆಲಸವನ್ನು ಕೊಟ್ಟು ಅವರಿಗೆ ಹಣವಲ್ಲದಿದ್ದರೂ ಊಟವನ್ನಾದರೂ ಕೊಡಬೇಕು ಎನ್ನುತ್ತಿದ್ದರು. ನಾವು ತಿಂದು, ಕುಡಿದು ಮಜಾ ಮಾಡಲು ದೇವರು ನಮ್ಮನ್ನು ಸೃಷ್ಟಿಸಿಲ್ಲ; ಬದಲಾಗಿ ನಮ್ಮ ಅನ್ನವನ್ನು ನಾವೇ ಬೆವರು ಸುರಿಸಿ ದುಡಿದು ಗಳಿಸಬೇಕೆಂದು ಸೃಷ್ಟಿಸಿದ್ದಾನೆ.

ಹರಿಜನ್ 30–10–37

10

# ಶೈಕ್ಷಣಿಕ ಸಮ್ಮೇಳನ

## ನಿರ್ಣಯಗಳು

ಸಮ್ಮೇಳನದ ಎರಡನೆಯ ಮತ್ತು ಕೊನೆಯ ದಿನದ ಸಭೆಯಲ್ಲಿ ಈ ಕೆಳಗಿನ ನಿರ್ಣಯಗಳನ್ನು ಅಂಗೀಕರಿಸಲಾಯಿತು.

1. ಈ ಸಮ್ಮೇಳನದ ಅಭಿಪ್ರಾಯದಲ್ಲಿ ಇಡೀ ದೇಶದಲ್ಲಿ ಏಳು ವರ್ಷಗಳ ಕಾಲ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ನೀಡಬೇಕು.

2. ಬೋಧನಾ ಮಾಧ್ಯಮವು ಮಾತೃಭಾಷೆಯಾಗಿರಬೇಕು

3. ಈ ಅವಧಿಯಲ್ಲಿ ಶೈಕ್ಷಣಿಕ ಪ್ರಕ್ರಿಯೆಯು

1 ಯಾವುದಾದರೊಂದು ಬಗೆಯ ದೈಹಿಕ ಶ್ರಮದ ಮತ್ತು ಉತ್ಪಾದನೆಗೆ ಅನುವಾಗುವ ಕೆಲಸಗಳನ್ನು ಕೇಂದ್ರವಾಗಿಟ್ಟುಕೊಳ್ಳುವ ಸ್ವರೂಪದ್ದಾಗಿರಬೇಕು ಹಾಗೂ

2 ನಾವು ಬೆಳೆಸಬೇಕಿರುವ ಇತರ ಸಾಮರ್ಥ್ಯಗಳನ್ನು ಮಗುವಿನ ವಾತಾವರಣಕ್ಕೆ ಅನುಗುಣವಾಗಿ ಆರಿಸಿರುವ ಕರಕುಶಲ ಕಲೆಯ ಜೊತೆ ಸಂಯೋಜನಾತ್ಮಕ ಸಂಬಂಧವನ್ನೂ ಹೊಂದಿರಬೇಕು ಎಂಬ ಮಹಾತ್ಮ ಗಾಂಧಿಯವರ ಪ್ರಸ್ತಾವನೆಯನ್ನು ಈ ಸಮ್ಮೇಳನವು ಅನುಮೋದಿಸುತ್ತದೆ.

3. ಈ ಶಿಕ್ಷಣ ವ್ಯವಸ್ಥೆಯು ಕ್ರಮೇಣವಾಗಿ ಶಿಕ್ಷಕರ ವೇತನವನ್ನು ಭರಿಸಲು ಸಾಧ್ಯವಾಗುತ್ತದೆಯೆಂದು ಈ ಸಮ್ಮೇಳನವು ನಿರೀಕ್ಷಿಸುತ್ತದೆ.

ಇದಾದನಂತರ, ಈ ಸಮ್ಮೇಳನದ ಚಿಂತನೆಗಳ ಆಧಾರದ ಮೇಲೆ ಒಂದು ಯೋಜಿತ ಪಠ್ಯಕ್ರಮವನ್ನು ಸಿದ್ಧಗೊಳಿಸಲು ಹಾಗೂ ಒಂದು ತಿಂಗಳೊಳಗೆ ಅವರ ವರದಿಯನ್ನು ಸಮ್ಮೇಳನದ ಅಧ್ಯಕ್ಷರಿಗೆ ಸಲ್ಲಿಸಲು ಒಂದು ಸಮಿತಿಯನ್ನು ನೇಮಿಸಲಾಯಿತು.

ಹರಿಜನ್, 30–10–'37

11

# ಸಮ್ಮೇಳನದ ಮುಕ್ತಾಯ

ಕಾರ್ಯಕಲಾಪಗಳನ್ನು ಮುಕ್ತಾಯಗೊಳಿಸುವ ಸಂದರ್ಭದಲ್ಲಿ ಗಾಂಧೀಜಿಯವರು ಮಾತನಾಡಿ ಸಮ್ಮೇಳನಕ್ಕೆ ಬಂದು ತಮ್ಮ ಜೊತೆ ಸಹಕರಿಸಿದ ಎಲ್ಲರಿಗೂ ಕೃತಜ್ಞನಾಗಿದ್ದೇನೆ ಎಂದು ಹೇಳಿದರು. ತಾವೆಲ್ಲರೂ ಮಾಡಬೇಕಿರುವ ಅನೇಕ ಕೆಲಸಗಳಲ್ಲಿ ಸಮ್ಮೇಳನವು ಮೊದಲನೆಯದು ಮಾತ್ರ, ಆದ್ದರಿಂದ ಮುಂದೆಯೂ ಇದೇ ರೀತಿಯ ಸಹಕಾರವನ್ನು ಎಲ್ಲರಿಂದ ನಿರೀಕ್ಷಿಸುವುದಾಗಿ ತಿಳಿಸಿದರು. ಈ ನಡುವೆ ಮಾಳವೀಯ ಅವರು ಒಂದು ಎಚ್ಚರಿಕೆಯ

ಥರದ ಟೆಲಿಗ್ರಾಮ್ ಅನ್ನು ಕಳಿಸಿದ್ದರು. ಆದರೆ ಅವರನ್ನು ಗಾಂಧೀಜಿಯವರು ಶಾಂತಗೊಳಿಸಿದರು ಮತ್ತು ಸಮ್ಮೇಳನದ ನಿರ್ಣಯಗಳು ಅಂತಿಮವೇನಲ್ಲ; ಇದು ಅನ್ವೇಷಕರ ಸಮ್ಮೇಳನ ಮಾತ್ರವಾಗಿದ್ದು,ತಮ್ಮ ಸಲಹೆ ಹಾಗೂ ಟೀಕೆಗಳನ್ನು ಹಂಚಿಕೊಳ್ಳಲು ಪ್ರತಿಯೊಬ್ಬರನ್ನೂ ಆಮಂತ್ರಿಸಲಾಗುವುದು ಎಂದು ವಿವರಿಸಿದರು. ಯಾವುದನ್ನೂ ಬಿರುಗಾಳಿಯೋಪಾದಿಯಲ್ಲಿ ಆಚರಣೆಗೆ ತರುವ ಉದ್ದೇಶವು ಅವರಿಗಿರಲಿಲ್ಲ. ರಾಷ್ಟ್ರೀಯ ಶಿಕ್ಷಣ ಮತ್ತು ಪಾನನಿರೋಧದ ಹಿಂದಿನ ಚಿಂತನೆಗಳು ಅಸಹಕಾರ ಸಿದ್ಧಾಂತಗಳಷ್ಟೇ ಹಳೆಯವು. ಆದರೆ ದೇಶದಲ್ಲಿ ಬದಲಾಗಿರುವ ಪರಿಸ್ಥಿತಿಗಳ ಕಾರಣದಿಂದಾಗಿ ಅವುಗಳನ್ನು ಈ ಸ್ವರೂಪದಲ್ಲಿ ಪ್ರಸ್ತುತಪಡಿಸಲಾಗಿವೆ.

ಹರಿಜನ್, 30–10–'37

## 12

## ಮುಂದಿನ ಹೆಜ್ಜೆಗಳು

ಶೈಕ್ಷಣಿಕ ಸಮ್ಮೇಳನದ ಕಾರ್ಯದ ಕುರಿತಾದ ದಾಖಲೆಗಳು ಬೇರೆಡೆ ದೊರೆಯುತ್ತವೆ. ಸಾರ್ವಜನಿಕರಿಗೆ ಮತ್ತು ಕಾಂಗ್ರೆಸ್ ಸಚಿವರಿಗೆ ನನ್ನ ಯೋಜನೆಯನ್ನು ನಿರೂಪಿಸುವುದರಲ್ಲಿ ಇದು ಬಹುಮುಖ್ಯ ಘಟ್ಟವಾಗಿತ್ತು. ಇದರಲ್ಲಿ ಬಹಳ ಸಚಿವರು ಭಾಗವಹಿಸಿದ್ದುದು ಸಂತೋಷಕರ ಸಂಗತಿಯಾಗಿತ್ತು. ಬಂದ ವಿರೋಧ ಮತ್ತು ಟೀಕೆಗಳು ಪ್ರಮುಖವಾಗಿ ನಾನು ಪ್ರತಿಪಾದಿಸಿದ ಸೀಮಿತ ಸ್ವರೂಪದ ಸ್ವಯಂ–ಪೋಷಿತ ಶಾಲೆಯ ಮಾದರಿಯ ಪರಿಕಲ್ಪನೆಯ ಬಗ್ಗೆಯೇ ಇದ್ದವು.ಆದ್ದರಿಂದ ಈ ಸಮ್ಮೇಳನವು ಕೈಗೊಂಡ ನಿರ್ಣಯವನ್ನು ಬಲು ಎಚ್ಚರಿಕೆಯಿಂದ ಮಾಡಲಾಗಿದ್ದಿತು. ಈ ಸಮ್ಮೇಳನವು ಮುಂದಿನ ದಿನಗಳಲ್ಲಿ ಅಪರಿಚಿತ ಕ್ಷೇತ್ರಗಳನ್ನು ತಲುಪಬೇಕಾಗಿ ಬರಬಹುದೆನ್ನುವುದರ ಬಗ್ಗೆ ಅನುಮಾನಗಳೇನೂ ಉಳಿದಿರಲಿಲ್ಲ. ಈ ತರಹದ ಯಾವುದೇ ಸಮಗ್ರ ಪೂರ್ವಾನುಭವಗಳೂ ನಮಗಿಲ್ಲ. ಆದರೆ ಈ ವಿಚಾರವು ಪ್ರಬಲವಾಗಿದ್ದರೆ ಅದು ತಂತಾನೇ ಯಶಸ್ವಿಯಾಗಿ ಅನುಷ್ಠಾನಗೊಳ್ಳುತ್ತದೆ. ಏಕೆಂದರೆ ಸ್ವಯಂ ಪೋಷಿತ ಶಾಲೆಗಳ ಪರಿಕಲ್ಪನೆಯಲ್ಲಿ ವಿಶ್ವಾಸವಿದ್ದವರಿಗೆ ಆ ಪರಿಕಲ್ಪನೆಯನ್ನು ಶಾಲೆಗಳಲ್ಲಿ ಸಾಕಾರ ಮಾಡಿ ತೋರಿಸುವ ಹೊಣೆಗಾರಿಕೆಯೂ ಇರುತ್ತದೆ.

ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಇಂಗ್ಲಿಷ್ ಹೊರತುಪಡಿಸಿ ಒಂದು ವೃತ್ತಿಕೌಶಲದ ಮೂಲಕ ನೀಡುವುದರ ಬಗ್ಗೆ ಸಂಪೂರ್ಣ ಸಹಮತ ವ್ಯಕ್ತವಾಯಿತು. ಒಂದು ವೃತ್ತಿಯ ಮುಖಾಂತರ ನೀಡುವ ಶಿಕ್ಷಣವು ಮಕ್ಕಳ ಸಂಪೂರ್ಣ ವ್ಯಕ್ತಿತ್ವವನ್ನು ವಿಕಸಿಸಬೇಕೆನ್ನುವ ನಿರೀಕ್ಷೆಯು, ಶಾಲೆಗಳು ಕಾರಖಾನೆಗಳಾಗಿ ಪರಿವರ್ತನೆ ಹೊಂದುವ ಸಾಧ್ಯತೆಯನ್ನು ಸಹಜವಾಗಿಯೇ ತಡೆಯುತ್ತದೆ. ಇದಕ್ಕೆ ಕಾರಣವಿದೆ. ತಾವು ಆರಿಸಿಕೊಂಡ ವೃತ್ತಿಯಲ್ಲಿ ಪರಿಣತಿಯನ್ನು ಸಾಧಿಸಿ ತೋರಿಸುವುದರ ಜೊತೆಗೆ ವಿದ್ಯಾರ್ಥಿಗಳು ಅವರು ಶಾಲೆಯಲ್ಲಿ ಕಲಿಯಬೇಕಿರುವ ಇತರ ವಿಷಯಗಳಲ್ಲಿಯೂ ಪರಿಣತಿಯನ್ನು ಪ್ರದರ್ಶಿಸಬೇಕಿರುತ್ತದೆ.

ಈ ಯೋಜನೆಯನ್ನು ಯಾವ ರೀತಿಯಲ್ಲಿ ಪ್ರಾಯೋಗಿಕವಾಗಿ ಅನುಷ್ಠಾನಗೊಳಿಸಬಹುದು ಮತ್ತು ಮಕ್ಕಳು ವರ್ಷದಿಂದ ವರ್ಷಕ್ಕೆ ಏನನ್ನು ತಿಳಿದಿರಬೇಕು ಎನ್ನುವ ಸಂಗತಿಗಳು ಡಾ. ಝಾಕೀರ್ ಹುಸೇನ್‌ಸಮಿತಿಯ ಪರಿಶ್ರಮದ ಫಲವಾಗಿ ಕಾಣಸಿಗುತ್ತವೆ.

ಈ ಸಮ್ಮೇಳನದ ನಿರ್ಣಯಗಳೆಲ್ಲವೂ ಪೂರ್ವನಿಶ್ಚಿತವಾಗಿದ್ದವು ಎನ್ನುವ ಆಕ್ಷೇಪಣೆಯೂ ಕೇಳಿಬಂದಿತ್ತು. ಆದರೆ ಯೋಚಿಸಿ ನೋಡಿದರೆ ಈ ಆಕ್ಷೇಪಣೆ ಸಿಂಧುವೆನ್ನಲಾಗದು. ಆ ಪರಿಸ್ಥಿತಿಯಲ್ಲಿ ಶಿಕ್ಷಣತಜ್ಞರನ್ನು ಯಾದೃಚ್ಛಿಕವಾಗಿ ಆಹ್ವಾನಿಸಿ, ಅವರ ದೃಷ್ಟಿಕೋನದಿಂದ ನೋಡಿದಾಗ ಖಂಡಿತವಾಗಿ ಕ್ರಾಂತಿಕಾರಿ ಎನಿಸುವ ನಿಲುಮೆಗಳ ಕುರಿತಾಗಿ ಅವರ ಅಭಿಪ್ರಾಯಗಳನ್ನು ಹೇಳಿರೆಂದು ಏಕಾಏಕಿ ಕೇಳುವುದು ಬಹುಶಃ ಅಸಾಧ್ಯ. ಹಾಗಾಗಿ ಶಿಕ್ಷಕರಾಗಿದ್ದು, ವೃತ್ತಿ ಸಂಬಂಧಿತ ಶಿಕ್ಷಣಕ್ಕೆ ಯಾವುದಾದರೂ ರೀತಿಯಲ್ಲಿ ಸಂಬಂಧಪಟ್ಟವರಿಗೆ ಮಾತ್ರ ಈ ಸಮ್ಮೇಳನಕ್ಕೆ ಆಹ್ವಾನ ನೀಡಲು ಸಾಧ್ಯವಿತ್ತು. ರಾಷ್ಟ್ರೀಯ ಶಿಕ್ಷಣದ ನಿಮಿತ್ತದಲ್ಲಿ ನನ್ನೊಂದಿಗೆ ಕೆಲಸ ಮಾಡುತ್ತಿರುವ ಸಹೋದ್ಯೋಗಿಗಳೇ ಈ ಹೊಸ ಪರಿಕಲ್ಪನೆಯನ್ನು ಸಹಾನುಭೂತಿಯಿಂದ ಸ್ವೀಕರಿಸುತ್ತಾರೆನ್ನುವುದರ ಬಗ್ಗೆ ನನಗೆ ನಂಬಿಕೆಯಿರಲಿಲ್ಲ. ಝಾಕೀರ್ ಹುಸೇನ್ ಸಮಿತಿಯ ಮೂಲಕ ನಿರ್ದಿಷ್ಟವಾಗಿ ಹಾಗೂ ಸಂಪೂರ್ಣವಾಗಿ ಈ ಯೋಜನೆಯನ್ನು ಸಾರ್ವಜನಿಕರ ಎದುರು ಪ್ರಸ್ತುತಪಡಿಸಿದ ಸಂದರ್ಭದಲ್ಲಿ ಶಿಕ್ಷಣತಜ್ಞರ ವಿಶಾಲ ಪರಿವೃತ್ತವನ್ನು ಕೂಡ ಆಹ್ವಾನಿಸಲಾಗುತ್ತದೆ. ಇದರಲ್ಲಿ ಅನುಮಾನವೇ ಇಲ್ಲ. ಇದರ ಕುರಿತಾಗಿ ಉಪಯುಕ್ತ ಸಲಹೆಗಳನ್ನು ಹೊಂದಿರುವ ಶಿಕ್ಷಣತಜ್ಞರು ತತ್‌ಕ್ಷಣವೇ ಅವುಗಳನ್ನು ವಾರ್ಧಾದಲ್ಲಿನ ಸಮಿತಿಯ ಸಂಚಾಲಕರು ಮತ್ತು ಕಾರ್ಯದರ್ಶಿಗಳಾಗಿರುವ ಶ್ರೀ ಆರ್ಯನಾಯಕಮ್ ಅವರಿಗೆ ಕಳಿಸಬೇಕೆಂದುವಿನಂತಿಸಿಕೊಳ್ಳುತ್ತಿದ್ದೇನೆ.

ಪುಟ್ಟ ಮಕ್ಕಳ ಶಿಕ್ಷಣವನ್ನು ಹೆಣ್ಣುಮಕ್ಕಳು –ಅದರಲ್ಲಿಯೂ ವಿಶೇಷವಾಗಿ ತಾಯಂದಿರು – ಹೆಚ್ಚು ಪರಿಣಾಮಕಾರಿಯಾಗಿ ನಿರ್ವಹಿಸಬಲ್ಲರೆಂದು ಸಮ್ಮೇಳನದ ಭಾಷಣಕಾರರಲ್ಲೊಬ್ಬರು ಒತ್ತಿ ಹೇಳಿದರು. ಬೇರೊಂದು ದೃಷ್ಟಿಕೋನದಿಂದ ನೋಡಿದರೆ ಪ್ರೊ. ಶಾ ಅವರ "ಕಡ್ಡಾಯ ಸೇವಾ ನಿಯೋಜನೆ" ಯ ಪರಿಕಲ್ಪನೆಗೆ ಇದು ಉತ್ತರವಾಗಬಹುದು. ಅತ್ಯಂತ ಪವಿತ್ರವೆಂದು ಪರಿಗಣಿಸಲಾಗುವ ಸೇವೆಯನ್ನು ಕೈಗೊಳ್ಳಲು, ಸ್ವಲ್ಪ ಬಿಡುವಿರುವ ದೇಶಭಕ್ತ ಮಹಿಳೆಯರಿಗೆ ಇದು ಅತ್ಯುತ್ತಮ ಅವಕಾಶ.ಆದರೆ ಹಾಗೆ ಮುಂದೆ ಬರುವ ಎಲ್ಲರೂ ಸಹ ಉತ್ತಮ ಪೂರ್ವಸಿದ್ಧತಾ ತರಬೇತಿಯನ್ನು ಕಡ್ಡಾಯವಾಗಿ ಪಡೆಯಲೇಬೇಕು. ಹೊಟ್ಟೆಪಾಡಿಗೆ ಕೆಲಸ ಹುಡುಕುತ್ತಿರುವವರು ಈ ಚಳುವಳಿಗೆ ಉದ್ಯೋಗ ಮತ್ತು ವೃತ್ತಿಜೀವನದ ಸಲುವಾಗಿ ಸೇರುವುದರಿಂದ ಏನೂ ಉಪಯೋಗವಿಲ್ಲ. ಅವರು ಈ ಯೋಜನೆಯತ್ತ ಒಲವು ತೋರಿಸುವುದಾದರೆ ಅದನ್ನು ಸಂಪೂರ್ಣವಾಗಿ ಸೇವಾ ಮನೋಭಾವದಿಂದ ನೋಡುತ್ತಾ ಬಾಳಿನ ಗುರಿಯೆಂದು ತಿಳಿಯಬೇಕು. ಅವರೇನಾದರೂ ಇದನ್ನು ಸ್ವಾರ್ಥಪರತೆಯಿಂದ ಮಾಡುವುದಾದರೆ, ಅವರು ತೀವ್ರ ನೈರಾಶ್ಯದ ಕೂಪಕ್ಕೆ ಜಾರುವುದರಲ್ಲಿ ಸಂದೇಹವಿಲ್ಲ. ಭಾರತ ದೇಶದ ಸಂಸ್ಕಾರವಂತ ಮಹಿಳೆಯರು ಹಳ್ಳಿಗರ ಜೊತೆ ಸಾಮಾನ್ಯಉದ್ದೇಶಗಳನ್ನು – ಅದರಲ್ಲಿಯೂ ಮಕ್ಕಳ ಮೂಲಕ – ಸಾಧಿಸುವುದಾದರೆ ಅವರು ನಮ್ಮ ಗ್ರಾಮೀಣ ಬದುಕಿನಲ್ಲಿ ಬಹು ದೊಡ್ಡ ಮೌನಕ್ರಾಂತಿಯೊಂದನ್ನು ತರಲುಸಾಧ್ಯ.

ಹರಿಜನ್, 30–10–'37

# ಭಾಗ ಮೂರು: ಸ್ವಯಂ ಪೋಷಿತ ಶಿಕ್ಷಣ

## 13

## ಶಿಕ್ಷಣ v/s ಅಬಕಾರಿ ವರಮಾನ

ಶಿಕ್ಷಣದ ಸಮಸ್ಯೆಗಳನ್ನು ಹೇಗೆ ಪರಿಹರಿಸಬಹುದು ಎನ್ನುವ ಸಂಗತಿಯು ದುರದೃಷ್ಟವಶಾತ್ ಅಬಕಾರಿ ವರಮಾನದಲ್ಲಿ ಆಗಿರುವ ಕೊರತೆಯ ಜೊತೆ ತಳುಕು ಹಾಕಿಕೊಂಡುಬಿಟ್ಟಿದೆ. ಹೌದು. ನಾವು ಹೊಸದಾಗಿ ಕೆಲವು ತೆರಿಗೆಗಳನ್ನೇನೋ ವಿಧಿಸಬಹುದು. ನಮ್ಮ ಈ ಬಡ ದೇಶವೂ ಕೂಡ ಕೆಲವು ಹೊಸ ತೆರಿಗೆಗಳನ್ನು ಹಾಕಬಹುದು ಎಂದು ಪ್ರೊಫೆಸರುಗಳಾದ ಶಾ ಮತ್ತು ಖಂಬಟ್ಟಾ ಅವರು ತೋರಿಸಿಕೊಟ್ಟಿದ್ದಾರೆ. ನಾವು ಹಣವಂತರಿಗೂ ಕೂಡ ಸಾಕಷ್ಟು ತೆರಿಗೆಗಳನ್ನು ಹಾಕಿಲ್ಲ. ಈ ಜಗತ್ತಿನಲ್ಲಿ, ಅದರಲ್ಲಿಯೂ ಈ ದೇಶದಲ್ಲಿ ಅಪಾರ ಪ್ರಮಾಣದ ಸಂಪತ್ತನ್ನು ಹೊಂದಿರುವುದನ್ನು ಮಾನವತೆಯ ವಿರುದ್ಧದ ಅಪರಾಧವೆಂದೇ ಪರಿಗಣಿಸಬೇಕಾಗುತ್ತದೆ. ಹಾಗಾಗಿ ತೆರಿಗೆಯನ್ನು ಒಂದು ಹಂತಕ್ಕಿಂತ ಹೆಚ್ಚು ಮಾಡಲುಸಾಧ್ಯವೇಇಲ್ಲ. ಇಂಗ್ಲೆಂಡಿನಲ್ಲಿ ಒಂದು ಮಟ್ಟದ ಆದಾಯ ದಾಟಿದ ನಂತರ ತೆರಿಗೆಯ ಪ್ರಮಾಣವು ಶೇಕಡಾ 70ಆಗುತ್ತದೆಯಂತೆ. ಭಾರತದಲ್ಲಿ ಇದಕ್ಕೂ ಹೆಚ್ಚು ಮಾಡಬಾರದು ಎನ್ನುವುದಕ್ಕೆ ಕಾರಣಗಳೇನೂ ಇಲ್ಲ. ಸಾವಿನ ತೆರಿಗೆ ಏಕಿರಬಾರದು? ಭಾರೀ ಶ್ರೀಮಂತರ ವಯಸ್ಸಿಗೆ ಬಂದಿರುವ ಗಂಡುಮಕ್ಕಳು ಪಿತ್ರಾರ್ಜಿತ  ಆಸ್ತಿಯನ್ನು ಪಡೆದರೆ ಅವರು ಆ ಆಸ್ತಿಯ ಕಾರಣದಿಂದಲೇ 'ಸೋತವರ' ಪಟ್ಟಿಗೆ ಸೇರುತ್ತಾರೆ. ಹಾಗಾಗಿ ದೇಶಕ್ಕೆ ದುಪ್ಪಟ್ಟು ನಷ್ಟ. ಏಕೆಂದರೆ ಈ ಪಿತ್ರಾರ್ಜಿತ ಆಸ್ತಿಯು ನ್ಯಾಯವಾಗಿ ಸೇರಬೇಕಾದುದುನಮ್ಮ ದೇಶಕ್ಕೆ. ದೇಶಕ್ಕೆ ಇನ್ನೂ ಒಂದು ನಷ್ಟವಾಗುತ್ತದೆ. ಆ ವಾರಸುದಾರರ ಪೂರ್ಣ ಸಾಮರ್ಥ್ಯವು ಆತನ ಶ್ರೀಮಂತಿಕೆಯ ಹೊರೆಯಿಂದ ನಲುಗಿಹೋಗುತ್ತದೆ. ಪ್ರಾಂತೀಯ ಸರಕಾರಗಳು ಸಾವಿನ ತೆರಿಗೆಯನ್ನು ವಿಧಿಸುವಂತಿಲ್ಲ ಎನ್ನುವ ಸಂಗತಿ ನನ್ನ ವಾದವನ್ನು ದುರ್ಬಲಗೊಳಿಸಲಾರದು.

ನಮ್ಮ ದೇಶವೀಗ ಶಿಕ್ಷಣಕ್ಷೇತ್ರದಲ್ಲಿ ಎಷ್ಟೊಂದು ಹಿಂದುಳಿದಿದೆಯೆಂದರೆ, ನಮ್ಮ ಶಾಲಾಶಿಕ್ಷಣವು ಹಣದ ಮೇಲೆ ಅವಲಂಬಿತವಾಗಿದ್ದರೆ ನಾವು ರಾಷ್ಟ್ರಕ್ಕೆ ನಮ್ಮ ಋಣವನ್ನು ಈ ಪೀಳಿಗೆಯ ಸೀಮಿತ ಕಾಲಾವಧಿಯಲ್ಲಿ ತೀರಿಸಲು ಸಾಧ್ಯವೇ ಇಲ್ಲ. ಹಾಗಾಗಿ ನಾನು ಒಂದು ದಿಟ್ಟ ನಿರ್ಧಾರ ತೆಗೆದುಕೊಂಡು ಶಿಕ್ಷಣವು ಸ್ವಯಂಪೋಷಿತವಾಗಿರಬೇಕೆಂದು ಸಲಹೆ ನೀಡುತ್ತಿದ್ದೇನೆ. ಶಿಕ್ಷಣವೆಂದರೆ ನನ್ನ ಪ್ರಕಾರ ಮಗು ಮತ್ತು ಮಾನವನ ದೇಹ, ಮನಸ್ಸು ಮತ್ತು ಚೈತನ್ಯ ಇವೆಲ್ಲದರ ಸಮಗ್ರ ವಿಕಾಸ. ಸಾಕ್ಷರತೆಯು ಶಿಕ್ಷಣದ ಅಂತಿಮ ಗುರಿಯಲ್ಲ; ಹಾಗೆ ನೋಡಿದರೆ ಅದು ಪ್ರಾರಂಭವೂ ಅಲ್ಲ. ಮಾನವರು ಶಿಕ್ಷಣ ಪಡೆಯುವ ವಿಧಾನಗಳಲ್ಲಿ ಇದು ಒಂದು ಮಾತ್ರ. ಸಾಕ್ಷರತೆಯು ತಂತಾನೇ ಶಿಕ್ಷಣವಾಗುವುದಿಲ್ಲ. ಆದ್ದರಿಂದ ನಾನು ಒಂದು ಉಪಯುಕ್ತ ಕರಕುಶಲ ಕಲೆಯ ಕಲಿಕೆಯಿಂದ ಪ್ರಾರಂಭಿಸುತ್ತೇನೆ ಹಾಗೂ ಆ ಮಗುವು ತರಬೇತಿಯನ್ನು ಪ್ರಾರಂಭಿಸಿದ ಮೊದಲ ಕ್ಷಣದಿಂದಲೇ ಉತ್ಪಾದನೆಯನ್ನು ಮೊದಲು ಮಾಡುತ್ತದೆ. ಹೀಗೆ ಮಾಡುವುದಾದರೆ ಪ್ರತಿಯೊಂದು ಶಾಲೆಯೂ ಸ್ವಯಂಪೋಷಿತ ಶಾಲೆಯಾಗುತ್ತದೆ. ಆದರೆ ಸರಕಾರವು ಇಂಥ ಶಾಲೆಗಳಲ್ಲಿ ಉತ್ಪಾದನೆಯಾದ ಸಾಮಗ್ರಿಗಳನ್ನು ಖರೀದಿ ಮಾಡುವ ಬದ್ಧತೆ ತೋರಿಸಬೇಕಷ್ಟೇ.

ಈ ಬಗೆಯಶಿಕ್ಷಣ ಪದ್ಧತಿಯಲ್ಲಿ ಮನಸ್ಸು ಮತ್ತು ಆತ್ಮಗಳ ಅತ್ಯುನ್ನತ ಬೆಳವಣಿಗೆಯಾಗುತ್ತದೆಯೆನ್ನುವುದು ನನ್ನ ಅಭಿಪ್ರಾಯ. ಆದರೆ ಕಲಿಸುವ ಕರಕುಶಲ ಕಲೆಗಳನ್ನು ಈಗ ಕಲಿಸುತ್ತಿರುವಂತೆ ಕೇವಲ ಯಾಂತ್ರಿಕವಾಗಿ ಕಲಿಸದೆ ವೈಜ್ಞಾನಿಕವಾಗಿ ಕಲಿಸಬೇಕು. ಇದರರ್ಥವೇನೆಂದರೆ, ಪ್ರತಿಯೊಂದು ಪ್ರಕ್ರಿಯೆಯ ಹಿಂದಿರುವ ತತ್ವ ಮತ್ತು ಇನ್ನಿತರ ವಿವರಗಳನ್ನು ಮಗು ತಿಳಿದಿರಬೇಕು. ಇದನ್ನು ನಾನು ಆತ್ಮವಿಶ್ವಾಸದ ಹಿನ್ನೆಲೆಯಿಲ್ಲದೇ ಹೇಳುತ್ತಿಲ್ಲ. ಏಕೆಂದರೆ ಇದು ನನ್ನದೇ ಅನುಭವವಾಗಿದೆ. ಕಾರ್ಮಿಕರಿಗೆ ನೂಲುವುದನ್ನು ಹೇಳಿಕೊಡುವ ಎಲ್ಲ ಸಂದರ್ಭದಲ್ಲಿಯೂ ಈ ವಿಧಾನವನ್ನು ಹೆಚ್ಚುಕಡಿಮೆ ಸಂಪೂರ್ಣವಾಗಿ ಅಳವಡಿಸಲಾಗಿತ್ತು. ನೂಲುವುದನ್ನು, ಚಪ್ಪಲಿ ತಯಾರಿಸುವುದನ್ನು ಕಲಿಸುವ ಸಂದರ್ಭದಲ್ಲಿ ನಾನೇ ಸ್ವತಃ ಈ ವಿಧಾನವನ್ನು

ಬಳಸಿ ಉತ್ತಮ ಫಲಿತಾಂಶವನ್ನು ಪಡೆದಿದ್ದೇನೆ. ಈ ವಿಧಾನವು ಇತಿಹಾಸ ಮತ್ತು ಭೂಗೋಳ ವಿಷಯಗಳ ಜ್ಞಾನವನ್ನು ಕಲಿಕೆಯಿಂದ ಹೊರಗಿಡುವುದಿಲ್ಲ. ಆದರೆ ಆ ಸ್ವರೂಪದ ಸಾಮಾನ್ಯ ಮಾಹಿತಿಯನ್ನು ಬೋಧಿಸುವ ಅತ್ಯುತ್ತಮ ವಿಧಾನವು ಬಾಯಿಯಿಂದ ಬಾಯಿಗೆ ಹರಡುವುದು ಎಂದು ನಾನು ನಂಬುತ್ತೇನೆನಾವು ಈ ಪದ್ಧತಿಯನ್ನು ಬಳಸಿಓದುವ ಮತ್ತು ಬರೆಯುವ ಪದ್ಧತಿಗಿಂತಲೂ ಹತ್ತು ಪಟ್ಟು ಹೆಚ್ಚು ವಿಷಯವನ್ನು ಕಲಿಸಬಹುದು. ವರ್ಣಮಾಲೆಯ ಅಕ್ಷರಗಳ ಸಂಕೇತಗಳನ್ನು ನಂತರ, ಅಂದರೆ ಯಾವುದು ಕಾಳು, ಯಾವುದು ಜೊಳ್ಳು ಎಂದು ಗುರುತಿಸುವ ಮತ್ತು ತನ್ನ ಅಭಿರುಚಿಯನ್ನು ವಿದ್ಯಾರ್ಥಿಯು ಬೆಳೆಸಿಕೊಂಡ ತರುವಾಯ ಕಲಿಸಬಹುದು. ಇದೊಂದು ಕ್ರಾಂತಿಕಾರೀ ಪ್ರಸ್ತಾವನೆಯಾದರೂ ಇದು ಅಗಾಧ ಪರಿಶ್ರಮವನ್ನು ಉಳಿಸುತ್ತದೆ ಹಾಗೂ ತುಂಬ ಹೆಚ್ಚು ಕಾಲ ತೆಗೆದುಕೊಳ್ಳುವ ಕಲಿಕೆಯು ಒಂದು ವರ್ಷದಲ್ಲಿಯೇ ಸಾಧ್ಯವಾಗುತ್ತದೆ. ಇದು ಅತ್ಯಂತ ಮಿತವ್ಯಯಕಾರಿ ವಿಧಾನ. ಇಲ್ಲಿ ವಿದ್ಯಾರ್ಥಿಯು ಕರಕುಶಲ ಕಲೆಯನ್ನು ಕಲಿಯುತ್ತಲೇ ಅದರೊಟ್ಟಿಗೇ ಗಣಿತವನ್ನೂ ಕಲಿಯುತ್ತಾನೆ.

ಪ್ರಾಥಮಿಕ ಶಿಕ್ಷಣಕ್ಕೆ ನಾನುಅತ್ಯಂತ ಹೆಚ್ಚು ಪ್ರಾಮುಖ್ಯತೆ ನೀಡುತ್ತೇನೆ. ಅದು ನನ್ನ ಪರಿಕಲ್ಪನೆಯಲ್ಲಿ ಇಂದಿನ ಮೆಟ್ರಿಕ್ಯುಲೇಷನ್‌ಗೆ ಸಮಾನ (ಇಂಗ್ಲೀಷ್ ಬಿಟ್ಟು) ಎಂದಿಟ್ಟುಕೊಳ್ಳಬಹುದು. ಕಾಲೇಜು ಕಲಿತವರೆಲ್ಲರೂ ಏಕಾಏಕಿ ಮರೆವಿನ ಕಾಯಿಲೆಗೆ ಗುರಿಯಾಗಿ ತಾವು ಕಲಿತ ಜ್ಞಾನವನ್ನೆಲ್ಲವನ್ನೂ ಮರೆತುಹೋದರೆ ಆ ಕೆಲವು ಲಕ್ಷ ಮಂದಿಯ ಮರೆವಿನಿಂದಾಗಬಹುದಾದ ನಷ್ಟವು ನಮ್ಮ ದೇಶದ ಮೂರು ಕೋಟಿ ಜನರ ಸುತ್ತ ಹುತ್ತಗಟ್ಟಿರುವ ಅಂಧಕಾರದಿಂದ ಆಗಿರುವ ನಷ್ಟಕ್ಕೆ ಹೋಲಿಸಿದರೆ ಏನೇನೂ ಅಲ್ಲ. ನಮ್ಮ ಕೋಟ್ಯಾಂತರ ಹಳ್ಳಿಗರ ನಿರಕ್ಷರತೆಯ ಪ್ರಮಾಣವು ಅವರಲ್ಲಿ ತುಂಬಿಕೊಂಡಿರುವ ಮೌಢ್ಯದ ಸರಿಯಾದ ಸೂಚಕವಲ್ಲ.

ನಾನು ಕಾಲೇಜು ಶಿಕ್ಷಣವನ್ನು ಆಮೂಲಾಗ್ರವಾಗಿ ಬದಲಾವಣೆ ಮಾಡುತ್ತೇನೆ ಮತ್ತು ಅದನ್ನು ರಾಷ್ಟ್ರೀಯ ಅಗತ್ಯಗಳಿಗೆ ಮರುಹೊಂದಿಸುತ್ತೇನೆ. ಮೆಕ್ಯಾನಿಕಲ್ ಮತ್ತು ಇತರ ಎಂಜಿನಿಯರ್‌ಗಳಿಗೆ ಪದವಿಗಳು ಇರುತ್ತವೆ. ಅವರನ್ನು ಬೇರೆ ಬೇರೆ ಉದ್ದಿಮೆಗಳಿಗೆ ಸಂಯೋಜಿಸಿ ಆ ಉದ್ದಿಮೆಗಳು ಪದವೀಧರರ ಶಿಕ್ಷಣದ ಖರ್ಚನ್ನು ಕೊಡುವಂತೆ ಮಾಡಲಾಗುತ್ತದೆ. ಹಾಗಾಗಿ, ಟಾಟಾ ಸಂಸ್ಥೆಯವರು ಎಂಜಿನಿಯರ್‌ಗಳ ತರಬೇತಿಗಾಗಿ ಸರಕಾರದ ಸುಪರ್ದಿಯಲ್ಲಿ ಒಂದು ಕಾಲೇಜನ್ನು ತೆರೆಯಬೇಕು; ಅದೇ ರೀತಿ ಉಳಿದವರು ತಮ್ಮ ಅಗತ್ಯಗಳಿಗೆ ಅನುಗುಣವಾಗಿ ಪದವೀಧರರನ್ನು ರೂಪಿಸಲು ಕಾಲೇಜುಗಳನ್ನು ನಡೆಸಬೇಕು. ಕಾಮರ್ಸ್‌ಗೆ ಅದರದೇ ಕಾಲೇಜು ಇರುತ್ತದೆ. ಹಾಗೆಯೇ ಕಲೆಗೆ, ವೈದ್ಯಕೀಯ ಶಿಕ್ಷಣಕ್ಕೆ ಮತ್ತು ಕೃಷಿಗೆ ಕಾಲೇಜುಗಳಿರುತ್ತವೆ. ಈಗಲೇ ಅನೇಕ ಖಾಸಗಿ ಕಲಾ ಕಾಲೇಜುಗಳು ಸ್ವಯಂಪೋಷಿತವಾಗಿವೆ. ಆ ಕಾರಣದಿಂದಾಗಿ ಸರಕಾರವು ತನ್ನದೇ ಕಾಲೇಜುಗಳನ್ನು ನಡೆಸುವ ಕಾರಣವಿಲ್ಲ. ವೈದ್ಯಕೀಯ ಕಾಲೇಜುಗಳು ಆಸ್ಪತ್ರೆಗಳ ಜೊತೆ ಸಂಯೋಜನೆಗೊಂಡಿರುತ್ತವೆ. ಇಂಥ ಆಸ್ಪತ್ರೆಗಳನ್ನು ಹಣವಂತರುಬಳಸುತ್ತಾರಾದ್ದರಿಂದ ಅವು ತಮ್ಮ ವೈದ್ಯಕೀಯ ಕಾಲೇಜುಗಳಿಗೆ ಸ್ವಯಂಪ್ರೇರಿತವಾಗಿದಾನವನ್ನು ನೀಡುತ್ತವೆಂದು ನಿರೀಕ್ಷಿಸಬಹುದು. ಇನ್ನು ಕೃಷಿ ಕಾಲೇಜುಗಳು ಸ್ವಾವಲಂಬಿಯಾಗಿರದಿದ್ದರೆ ಅವುಗಳ ಹೆಸರಿಗೇ ಕಳಂಕ. ನನಗೆ ಕೆಲವು ಕೃಷಿ ಪದವೀಧರರ ಜೊತೆ ಕಹಿ ಅನುಭವಗಳಾಗಿವೆ. ಅವರ ಜ್ಞಾನವು ತಲಸ್ಪರ್ಶಿಯಾಗಿರದ ಬರೀ ಮೇಲುಮೇಲಿನ ತಿಳಿವಳಿಕೆ ಮಾತ್ರ. ಅವರಿಗೆ ಪ್ರಾಯೋಗಿಕ ಅನುಭವವಿರುವುದಿಲ್ಲ. ಆದರೆ ಅವರು ತಮ್ಮ ಶಿಷ್ಯವೃತ್ತಿ (Apprentice)ಯನ್ನು ಸ್ವಾವಲಂಬಿ ಕೃಷಿ ಫಾರ್ಮ್‌ಗಳಲ್ಲಿ ಮಾಡಿದ್ದಿದ್ದರೆ ಹಾಗೂ ದೇಶದ ಅಗತ್ಯಗಳಿಗೆ ಸೂಕ್ತವಾಗಿ ಸ್ಪಂದಿಸಿದ್ದರೆ ಅವರಿಗೆ ಪದವಿ ಪಡೆದ ನಂತರ ತಮ್ಮ ಉದ್ಯೋಗದಾತರ ಖರ್ಚಿನಲ್ಲಿ ಅನುಭವ ಪಡೆದುಕೊಳ್ಳುವ ಸಂದರ್ಭ ಎದುರಾಗುತ್ತಿರಲಿಲ್ಲ.

ಇದು ಕಾಲ್ಪನಿಕ ಸಾಮ್ರಾಜ್ಯವಲ್ಲ. ನಾವು ನಮ್ಮ ಮಾನಸಿಕ ಜಡತ್ವವನ್ನು ಒದ್ದೋಡಿಸಿದರೆ, ಅದು ಕಾಂಗ್ರೆಸ್ ಸಚಿವರಿಗೆ ಮತ್ತು ಆ ಕಾರಣದಿಂದಲೇ ಕಾಂಗ್ರೆಸ್‌ಗೂ ಮುಖಾಮುಖಿಯಾಗಿರುವ ಶೈಕ್ಷಣಿಕ ಸಮಸ್ಯೆಗಳಿಗೆ ಅತ್ಯಂತ ಸಾಧುವೂ ಸಾಧ್ಯವೂ ಪ್ರಾಯೋಗಿಕವೂ ಆದ ಪರಿಹಾರವೆಂದು ನನಗೆ ಭಾಸವಾಗುತ್ತಿದೆ. ಇತ್ತೀಚೆಗೆ ಬ್ರಿಟಿಷ್ ಸರಕಾರದ ವತಿಯಿಂದ ಮಾಡಿರುವ ಕೆಲವು ನಿರ್ಣಯಗಳು ಅವು ನಿಜಕ್ಕೂ ಮೇಲ್ನೋಟಕ್ಕೆ ತೋರುವಂತೆಯೇ ಆಗಿರುವುದಾದರೆ ಸರಿ; ತಮ್ಮ ಕಾರ್ಯನೀತಿಗಳನ್ನು ಅನುಷ್ಠಾನಗೊಳಿಸಲು ಬೇಕಿರುವ ನಾಗರಿಕ ಸೇವಾ ವ್ಯವಸ್ಥೆಯ ಯಾವತ್ತೂ ಸಾಧನಗಳು ಅವರ ಬಳಿಯೇ ಇರುತ್ತವೆ. ನಮ್ಮ ನಾಗರಿಕ ಸೇವಾ ವ್ಯವಸ್ಥೆಯ ಮಂದಿತಿಕ್ಕಲುಗವರ್ನರ್‌ಗಳು ಮತ್ತು ವೈಸ್‌ರಾಯ್‌ಗಳಿಂದ ಬರುವ ಕಾರ್ಯನೀತಿಗಳನ್ನೂ ಸಹ ತೆಳುವಾಗಿಸುವ ಕಲೆಯಲ್ಲಿ ನಿಷ್ಣಾತರಾಗಿದ್ದಾರೆ. ನಮ್ಮ ಸಚಿವರು ಉತ್ತಮ ನಿರ್ಧರಿತ ನೀತಿಗಳನ್ನು ರೂಪಿಸಿ, ನಾಗರಿಕ ಸೇವೆಗಳು ಆ ನೀತಿಗಳನ್ನು "ಉಪ್ಪು ತಿಂದ ಮನೆಗೆ ಎರಡು ಬಗೆಯದ" ಮನೋಧರ್ಮದಿಂದ ಅನುಷ್ಠಾನಗೊಳಿಸಲು ಅವಕಾಶ ಮಾಡಿಕೊಡಲಿ.

ಈ ನಡುವೆ ಶಿಕ್ಷಕರ ಪ್ರಶ್ನೆ ಉಳಿದುಕೊಂಡಿತು. ಇದಕ್ಕೆ ಸಂಬಂಧಿಸಿದಂತೆ ಬೇರೊಂದು ಕಡೆ ಲೇಖನವೊಂದರಲ್ಲಿ ಪ್ರಕಟವಾಗಿರುವ ಪ್ರೊಫೆಸರ್ ಕೆ.ಟಿ.ಶಾ ಅವರ ಶಿಕ್ಷಿತ ಪುರುಷ ಮತ್ತು ಮಹಿಳೆಯರಿಗೆ "ಕಡ್ಡಾಯ ಸೇವೆ" ಯನ್ನು ಜಾರಿಗೊಳಿಸುವ ಚಿಂತನೆಯನ್ನುನಾನು ಮೆಚ್ಚಿಕೊಳ್ಳುತ್ತೇನೆ. ಅವರು ಕಡ್ಡಾಯವಾಗಿ ಕೆಲವು (ಉದಾ: ಐದು) ವರ್ಷಗಳನ್ನು ತಾವು ಕಲಿತಿದ್ದನ್ನು ಕಲಿಸಲು ಮೀಸಲಿಡುವ ಯೋಜನೆ. ಇಲ್ಲಿ ಶಿಕ್ಷಕರ ಸಂಬಳವು ದೇಶದ ಆರ್ಥಿಕ ಪರಿಸ್ಥಿತಿಯನ್ನು ಆಧರಿಸಿದ್ದು ಅದು ಕೇವಲ ಅವರ ಉಪಜೀವನಕ್ಕೆ ಸಾಕಾಗುವಷ್ಟು ಮಾತ್ರ ಇರುತ್ತದೆ. ಉನ್ನತ ಶಿಕ್ಷಣದಲ್ಲಿ ಅಧ್ಯಾಪಕರು ಮತ್ತು ಪ್ರಾಧ್ಯಾಪಕರು ಒತ್ತಾಯಿಸುತ್ತಿರುವ ಆಕಾಶದೆತ್ತರದ ಸಂಬಳಗಳ ಬೇಡಿಕೆ ಹೋಗಬೇಕು. ಹಳ್ಳಿಗಳ ಶಿಕ್ಷಕರ ಜಾಗದಲ್ಲಿ ಸಮರ್ಥ ಶಿಕ್ಷಕರು ಬರಬೇಕು.*

ಹರಿಜನ್, 31–7–'37

## 14

## ಶಿಕ್ಷಣವೆಂಬ ಕಗ್ಗಂಟು

ಕಾಂಗ್ರೆಸ್ ಸಚಿವರು ತಮ್ಮ ಅಧಿಕಾರವನ್ನು ಸ್ವೀಕರಿಸಿದ ನಂತರ ಶಿಕ್ಷಣದ ಕುರಿತಾಗಿ ಮಾಡಿದ ಅನೇಕ ಭಾಷಣಗಳಲ್ಲಿ ಒಮ್ಮೆ "ಹೊಸ ಸುಧಾರಣೆಗಳ ಅತ್ಯಂತ ಕ್ರೂರ ವ್ಯಂಗ್ಯವೆಂದರೆ ನಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಲು ಅಗತ್ಯವಿರುವ ಹಣ ಹೊಂದಿಸಲು ನಮಗೆ ಮದ್ಯದ ಮಾರಾಟದಿಂದ ಬರುವ ಆದಾಯವನ್ನು ಬಿಟ್ಟರೆ ಬೇರೆ ಸಂಪನ್ಮೂಲವಿಲ್ಲ" ಎಂದು ಗಾಂಧೀಜಿಯವರು ಹೇಳಿದ್ದರು. " ಇದು ಶಿಕ್ಷಣದ ಕಗ್ಗಂಟು. ಆದರೆ ಇದರಿಂದ ನಾವು ವಿಚಲಿತರಾಗಬೇಕಿಲ್ಲ. ನಾವಿದನ್ನು ಪರಿಹರಿಸಬೇಕು ಮತ್ತು ಆ ಪರಿಹಾರವನ್ನು ಹುಡುಕುವ ನಿಟ್ಟಿನಲ್ಲಿ ನಾವು ಮದ್ಯ ನಿಷೇಧದ ಬಗೆಗಿನ ನಮ್ಮ ಖಚಿತ ನಿಲುವಿನಲ್ಲಿ ಯಾವುದೇ ಕಾರಣಕ್ಕಾಗಿಯೂ ರಾಜಿ ಮಾಡಿಕೊಳ್ಳಬಾರದು. ಸರಕಾರಕ್ಕೆ ಮದ್ಯ ಮಾರಾಟದಿಂದ ಹಣ ಬರದಿದ್ದರೆ ನಮ್ಮ ಮಕ್ಕಳು ತಮ್ಮ

* ಹರಿಜನ್, 31–7–'37

ಶಿಕ್ಷಣದಿಂದ ವಂಚಿತರಾಗಬೇಕಾಗುತ್ತದೆ ಎನ್ನುವ ಆಲೋಚನೆಯೇ ನಾವು ತಲೆ ತಗ್ಗಿಸುವಂತೆ ಮಾಡಬೇಕು. ಆದರೂ ಅಂಥ ಸಂದರ್ಭವೇನಾದರೂ ನಮಗೆ ಬಂದರೆ ನಾವು ಎರಡರಲ್ಲಿ ಕಡಿಮೆ ಕೆಡುಕು ಯಾವುದೋ ಅದನ್ನು ಆರಿಸಿಕೊಳ್ಳಬೇಕು. ನಾವು ಈ ಅಂಕಿ–ಅಂಶಗಳಲ್ಲಿ ಮುಳುಗಿಹೋಗದಿದ್ದರೆ, ನಾವು ಮಕ್ಕಳಿಗೆ ಇಂದು ನೀಡುತ್ತಿರುವ ಸ್ವರೂಪದ ಶಿಕ್ಷಣವನ್ನೇ ನೀಡಬೇಕೆಂಬ ಹಠ ಹಿಡಿಯದಿದ್ದರೆ ಈ ಸಮಸ್ಯೆ ನಮ್ಮನ್ನು ದಿಗ್ಭ್ರಮೆಗೊಳಿಸಲಾರದು." ನಮ್ಮ ದೇಶದ ಅಪಾರ ಗ್ರಾಮೀಣ ಜನತೆಯ ಅಗತ್ಯಗಳಿಗೆ ಸ್ಪಂದಿಸುವ ಮತ್ತು ಅತ್ಯಂತ ಕಡಿಮೆ ಖರ್ಚಿನ ಶೈಕ್ಷಣಿಕ ಪದ್ಧತಿಯನ್ನು ರೂಪಿಸಲು ನಮ್ಮ ಶಿಕ್ಷಣತಜ್ಞರೆಲ್ಲರೂ ಒಟ್ಟಾಗಿ ಚಿಂತಿಸಬೇಕೆಂದು ಗಾಂಧೀಜಿಯವರು ಒತ್ತಿ ಹೇಳುತ್ತಿದ್ದ ಕಾರಣ ಇಲ್ಲಿ ವಿಶದವಾಗುತ್ತದೆ.

" ಆಗ ನೀವು ಸೆಕೆಂಡರಿ ಎಂದು ನಾವಿಂದು ಕರೆಯುತ್ತಿರುವ ಶಿಕ್ಷಣವನ್ನು ತೆಗೆದು ಮ್ಯಾಟ್ರಿಕ್ಯುಲೇಷನ್‌ವರೆಗಿನ ಶಿಕ್ಷಣವನ್ನು ಹಳ್ಳಿಯ ಶಾಲೆಗಳಲ್ಲಿಯೇ ನೀಡಬಹುದೇ" ಎಂದು ಯಾರೋ ಒಬ್ಬರು ಅಚ್ಚರಿಯಿಂದ ಪ್ರಶ್ನಿಸಿದ್ದರು.

"ಖಂಡಿತ ಹೌದು. ಯಾವುದು ನಿಮ್ಮ ಸೆಕೆಂಡರಿ ಶಿಕ್ಷಣ? ಬಡ ಮಕ್ಕಳು ಒಂದೆರಡು ವರ್ಷಗಳಲ್ಲಿ ತಮ್ಮ ಮಾತೃಭಾಷೆಯಲ್ಲಿ ಕಲಿಯಬಹುದಾದದ್ದನ್ನು ಏಳು ವರ್ಷಗಳಲ್ಲಿ ಒಂದು ವಿದೇಶೀ ಭಾಷೆಯಲ್ಲಿ ಕಲಿಯುವುದೇ? ನೀವು ದೃಢ ನಿಶ್ಚಯ ಮಾಡಿ ವಿದೇಶೀ ಭಾಷೆಯಲ್ಲಿ ಶಾಲಾ ವಿಷಯಗಳನ್ನು ಕಲಿಯುವ ಭೂತದಿಂದ ಮಕ್ಕಳನ್ನು ಬಿಡುಗಡೆ ಮಾಡಿ, ಅವರ ಕೈಗಳು ಮತ್ತು ಕಾಲುಗಳನ್ನು ಅರ್ಥಪೂರ್ಣವಾಗಿ ಬಳಸುವುದನ್ನು ಕಲಿಸಿದರೆ ಆಗ ಶಿಕ್ಷಣವೆಂಬ ಕಗ್ಗಂಟನ್ನು ಬಿಡಿಸಿದಂತೆ. ಹಾಗಾದರೆ ನಾವು ಮದ್ಯದ ಆದಾಯದಿಂದ ಸಂಪೂರ್ಣವಾಗಿ ದೂರಸರಿಯಬಹುದು. ಆದರೆ ಹೀಗೆ ದೂರ ಉಳಿಯುವ ನಿರ್ಧಾರವನ್ನು ಮೊದಲು ತೆಗೆದುಕೊಂಡು ನಂತರವೇ ಶಿಕ್ಷಣದ ವಿಧಾನ ಮತ್ತಿತರ ವಿವರಗಳನ್ನು ಕೈಗೆತ್ತಿಕೊಳ್ಳಬೇಕಾಗುತ್ತದೆ. ಬಲುದೊಡ್ಡ ಹೆಜ್ಜೆ ಹಾಕುವುದರೊಂದಿಗೆ ಪ್ರಾರಂಭಿಸಬೇಕು.

ಹರಿಜನ್, 21–8–'37

## 15

## ಸ್ವಯಂ ಪೋಷಿತ ಶಿಕ್ಷಣ

ಡಾ. ಎ. ಲಕ್ಷ್ಮೀಪತಿ ಬರೆಯುತ್ತಾರೆ:

"ಮಿಷನರಿಗಳು ನಡೆಸುವ ಕೆಲವು ವಿದ್ಯಾಸಂಸ್ಥೆಗಳಲ್ಲಿ ಬೆಳಗಿನ ಅವಧಿಯಲ್ಲಿ ಮಾತ್ರ ಶಾಲೆ ನಡೆಸಿ, ಮಧ್ಯಾಹ್ನದ ಅವಧಿಯ ಸಮಯವನ್ನು ಕೃಷಿ ಕಾರ್ಯಾಚರಣೆ ಅಥವಾ ಯಾವುದಾದರೂ ಕರಕುಶಲ ಕೌಶಲಕ್ಕೆ ಸಂಬಂಧಿಸಿದ ಚಟುವಟಿಕೆಯನ್ನು ಮಾಡುವುದನ್ನು ನಾನು ಗಮನಿಸಿದ್ದೇನೆ. ತಮ್ಮ ಕೆಲಸಗಳಿಗೆ ವಿದ್ಯಾರ್ಥಿಗಳು ಅದರ ಪ್ರಮಾಣ ಮತ್ತು ಗುಣಮಟ್ಟಗಳಿಗೆ ಅನುಗುಣವಾಗಿ ಒಂದಷ್ಟು ವೇತನ ಗಳಿಸುತ್ತಾರೆ. ಈ ರೀತಿಯಾಗಿ ಸಂಸ್ಥೆಯು ಹೆಚ್ಚುಕಡಿಮೆ ಸ್ವಯಂಪೋಷಿತ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತದೆ ಮತ್ತು ವಿದ್ಯಾರ್ಥಿಗಳು ಶಾಲೆಯಿಂದ ಹೊರಬಂದಾಗ ತಮ್ಮ ಉಪಜೀವನಕ್ಕೆ ಅಗತ್ಯವಿರುವ ಯಾವುದಾದರೊಂದು ಸಾಮರ್ಥ್ಯವನ್ನು ಗಳಿಸಿರುವುದರಿಂದ ಅವರು ಹೊರಜಗತ್ತಿಗೆ ಬಂದಾಗ ನೀರಿನಿಂದ ಹೊರಬಂದ ಮೀನಿನಂತೆ ಚಡಪಡಿಸುವುದಿಲ್ಲ. ಆ ಶಾಲೆಗಳ ವಾತಾವರಣವು, ಶಿಕ್ಷಣ ಇಲಾಖೆಯು ನಡೆಸುವ ರೂಢಿಗತ ಶಾಲೆಗಳಂತೆ ಏಕತಾನತೆಯಿಂದ ತುಂಬಿರದೆ ಬಹಳ ಭಿನ್ನವಾಗಿರುತ್ತದೆ. ಹುಡುಗರು ಇನ್ನಷ್ಟು ಆರೋಗ್ಯದಿಂದ ಇದ್ದು ತಾವು ಏನೋ ಉಪಯುಕ್ತವಾದುದನ್ನು ಮಾಡಿದ್ದೇವೆನ್ನುವ ಭಾವದಿಂದ ಹೆಚ್ಚು ಸಂತೋಷವಾಗಿಯೂ ಇರುತ್ತಾರೆ. ಅವರ ದೈಹಿಕ

ಸಾಮರ್ಥ್ಯಗಳೂ ಅಧಿಕ. ಕ್ಷೇತ್ರ ಕಾರ್ಯಕ್ಕೆ ಹೆಚ್ಚು ಸಮಯ ನೀಡಬೇಕಾಗಿರುವ, ಪ್ರಧಾನವಾಗಿ ಕೃಷಿ ಸಂದರ್ಭದಲ್ಲಿ, ಈ ಶಾಲೆಗಳು ಕೆಲಕಾಲ ಮುಚ್ಚಿರುತ್ತವೆ. ನಗರಗಳಲ್ಲಿಯೂ ಸಹ ಸೂಕ್ತ ಸಾಮರ್ಥ್ಯ ಮತ್ತು ಅಭಿರುಚಿಯನ್ನು ಆಧರಿಸಿಯಾವುದಾದರೂ ಕಸುಬು ಮತ್ತು ವೃತ್ತಿ ಕೌಶಲಗಳನ್ನು ಹುಡುಗರಲ್ಲಿ ಬೆಳೆಸಿ ಅವರ ಗಮನವನ್ನು ಬೇರೆಡೆ ಸೆಳೆಯಬಹುದು. ಅಗತ್ಯ ಹೆಚ್ಚಿರುವ ಅಥವಾ ಬಯಸುವ ಎಲ್ಲ ಮಕ್ಕಳಿಗೆ ಶಾಲೆಯಲ್ಲಿಯೇ ಬೆಳಗಿನ ಅವಧಿಯಲ್ಲಿ ಅರ್ಧ ಗಂಟೆಯ ಬಿಡುವು ಕೊಟ್ಟುಒಂದು ಊಟ ನೀಡಬಹುದು.ಬಡ ಮಕ್ಕಳಿಗೆ ಖುಷಿಯಿಂದ ಶಾಲೆಯ ಕಡೆಗೆ ಓಡುವ ಹುಮ್ಮಸ್ಸು ಬರುತ್ತದೆ ಮತ್ತು ಅವರನ್ನು ಶಾಲೆಗೆ ನಿಯಮಿತವಾಗಿ ಕಳಿಸಲು ಅವರ ಪಾಲಕರಿಗೂ ಇದು ಪ್ರೇರಣೆ ನೀಡುತ್ತದೆ."

" ಈ ರೀತಿಯ ಅರ್ಧ ದಿನದ ಶಾಲೆಯನ್ನು ಅನುಷ್ಠಾನಕ್ಕೆ ತರುವುದಾದರೆ ಇಲ್ಲಿರುವ ಶಿಕ್ಷಕರ ಸೇವೆಯನ್ನು ಹೆಚ್ಚಿನ ಹಣದ ಖರ್ಚೇನೂ ಇಲ್ಲದೆ ಆಯಾ ಗ್ರಾಮಗಳಲ್ಲಿ ವಯಸ್ಕರ ಶಿಕ್ಷಣದ ಅಭಿವರ್ಧನೆಗೆ ಬಳಸಿಕೊಳ್ಳಬಹುದು. ಕಟ್ಟಡ ಮತ್ತು ಇತರ ಸೌಲಭ್ಯಗಳನ್ನೂ ಅದೇ ರೀತಿಯಾಗಿ ಉಪಯೋಗಿಸಿಕೊಳ್ಳಬಹುದು."

"ನಾನು ಮದರಾಸಿನ ಶಿಕ್ಷಣ ಸಚಿವರನ್ನು ಭೇಟಿಯಾಗಿ ಪ್ರಸಕ್ತ ಪೀಳಿಗೆಯ ಆರೋಗ್ಯ ಶಿಥಿಲಗೊಳ್ಳಲು ಪ್ರಮುಖವಾಗಿ ಶಾಲೆಗಳಲ್ಲಿ ತಪ್ಪು ಸಮಯದಲ್ಲಿ ಶಿಕ್ಷಣ ನೀಡುತ್ತಿರುವುದು ಕಾರಣ ಎಂದು ನಿರೂಪಿಸಿ ಒಂದು ಪತ್ರವನ್ನು ಕೊಟ್ಟಿದ್ದೇನೆ. ಎಲ್ಲ ಶಾಲೆ ಮತ್ತು ಕಾಲೇಜುಗಳೂ ಪೂರ್ವಾಹ್ನದಲ್ಲಿ ಅಂದರೆ ಬೆಳಗ್ಗೆ 6 ರಿಂದ 11 ರ ವರೆಗೆ ಮಾತ್ರ ಕಾರ್ಯ ನಿರ್ವಹಿಸಬೇಕು ಎಂದು ನನ್ನ ಅಭಿಪ್ರಾಯ. ಶಾಲೆಯಲ್ಲಿ ನಾಲ್ಕು ಗಂಟೆಗಳ ಕಾಲ ಕಲಿಕೆ ಸಾಕಾಗುತ್ತದೆ. ಮಧ್ಯಾಹ್ನ ಮನೆಯಲ್ಲಿದ್ದು ನಂತರ ಸಾಯಂಕಾಲ ಆಟ ಮತ್ತು ಇತರ ದೈಹಿಕ ವ್ಯಾಯಾಮಗಳಿಗೆ ಮೀಸಲಿಡಬೇಕು. ಕೆಲವರು ಹುಡುಗರು ದುಡಿಮೆಯಿಂದ ಹಣ ಗಳಿಸುವ ದಾರಿ ಹಿಡಿದು ಹೋಗಬಹುದು. ಉಳಿದವರು ತಮ್ಮ ಪಾಲಕರ ವೃತ್ತಿ ಅಥವಾ ವ್ಯಾಪಾರದಲ್ಲಿ ಅವರಿಗೆ ಸಹಾಯ ಮಾಡಬಹುದು. ಮಕ್ಕಳು ತಮ್ಮ ಪಾಲಕರ ಜೊತೆ ಹೆಚ್ಚು ಒಡನಾಟ ಹೊಂದಿರುತ್ತಾರೆ. ಇದು ಯಾವುದೇ ವೃತ್ತಿಯ ಅಥವಾ ಕುಟುಂಬಾಧಾರಿತ ಕಸುಬುಗಳ ಬೆಳವಣಿಗೆಗೆ ಇದು ಬಹಳ ಮುಖ್ಯ."

"ದೇಹದ ಬಲವರ್ಧನೆಯು ದೇಶದ ಬಲವರ್ಧನೆಯೆಂದು ನಾವು ಅರಿತುಕೊಂಡರೆ ಆಗ ಈ ಪ್ರಸ್ತಾಪಿತ ಬದಲಾವಣೆಗಳು ಸಾಂಪ್ರದಾಯಿಕ ಭಾರತೀಯರಿಗೆ ಮೇಲ್ನೋಟಕ್ಕೆ ಕ್ರಾಂತಿಕಾರಿ ಎನ್ನಿಸಿದರೂ ಸಹ ಹೆಚ್ಚಿನವರಿಗೆ ಇದು ಒಪ್ಪಿತವಾಗಿಯೇ ಆಗುತ್ತದೆ."

ಶಾಲೆಗಳನ್ನು ಬೆಳಗಿನ ಅವಧಿಗೆ ಮಾತ್ರ ಸೀಮಿತವಾಗಿಸುವ ಡಾ. ಲಕ್ಷ್ಮೀಪತಿಯವರ ಸಲಹೆಯ ಕುರಿತಾಗಿ ಹೆಚ್ಚಿಗೆ ಹೇಳಲು ಬಯಸುವುದಿಲ್ಲ; ಅದನ್ನು ನಾನು ಶೈಕ್ಷಣಿಕ ಆಡಳಿತ ನಿರ್ವಾಹಕರಿಗೆ ತಲುಪಿಸುತ್ತೇನೆ. ಅಜಮಾಸು ಸ್ವಯಂ ಪೋಷಿತ ಶಾಲೆಗಳ ಬಗ್ಗೆ ಹೇಳುವುದಾದರೆ, ಅವರು ಬೇರೆ ರೀತಿಯಲ್ಲಿಸಂಪೂರ್ಣ ಅಥವಾ ಭಾಗಶಃ ಶಾಲೆಯನ್ನು ನಿಭಾಯಿಸುವಷ್ಟು ಹಣಗಳಿಸುವುದಾದರೆ ಅವರು ತಮ್ಮ ವಿದ್ಯಾರ್ಥಿಗಳನ್ನು ಯಾವ ರೀತಿಯಿಂದಲೂ ರೂಪಿಸಲಾರರು ಎನಿಸುತ್ತದೆ.

ಆದರೂ ನನ್ನ ಸಲಹೆಯು ಕೆಲವು ಶಿಕ್ಷಣತಜ್ಞರನ್ನು ಬೆಚ್ಚಿಬೀಳಿಸಿದೆಯಂತೆ. ಏಕೆಂದರೆ ಅವರಿಗೆ ರೂಢಿಗತ ವಿಧಾನವನ್ನು ಹೊರತುಪಡಿಸಿ ಬೇರೆ ಯಾವುದೇ ವಿಧಾನ ತಿಳಿಯದು. ಶಿಕ್ಷಣವು ಸ್ವಯಂ ಪೋಷಿತವಾಗಬೇಕು ಎನ್ನುವ ಪರಿಕಲ್ಪನೆಯಿಂದಾಗಿಶಿಕ್ಷಣವನ್ನು ಅದರ ಮೌಲಿಕತೆಯಿಂದಲೇ ವಂಚಿಸುತ್ತಿದ್ದೇವೆ ಎಂದು ಅವರಿಗೆ ಭಾಸವಾಗುತ್ತದೆ. ಈ ಸಲಹೆಯಲ್ಲಿ ಅವರಿಗೆ ಸಂಬಳದ ಸೈನಿಕರ ಮನೋಧರ್ಮದ ನೆರಳುಕಾಣಿಸುತ್ತದೆ.ಆದರೆ ನಾನು ಇದೀಗ ಶೈಕ್ಷಣಿಕ ಸಂಗತಿಗಳಿಗೆ

ಸಂಬಂಧಿಸಿದಂತೆ ಯಹೂದಿಗಳ ಪ್ರಯತ್ನಗಳ ಒಂದು ಏಕವಿಷಯಕ ಪ್ರಬಂಧ (monograph) ವೊಂದನ್ನು ಓದುತ್ತಿದ್ದೇನೆ. ಅದರಲ್ಲಿ ಯಹೂದಿಗಳ ಶಾಲೆಗಳಲ್ಲಿ ನೀಡುತ್ತಿರುವ ವೃತ್ತಿ ಶಿಕ್ಷಣದ ಬಗ್ಗೆ ಬರೆಯುತ್ತಾರೆ. :

"ಅವರು ತಮ್ಮ ದೈಹಿಕ ಶ್ರಮವು ತನ್ನಷ್ಟಕ್ಕೆ ತಾನೇ ಮೌಲಿಕವಾದದ್ದು ಎಂದು ಅರಿಯುತ್ತಾರೆ. ಅದು ಬೌದ್ಧಿಕ ಚಟುವಟಿಕೆಯ ಲೇಪದಿಂದಾಗಿ ತುಸು ಲಘುವಾಗುತ್ತದೆ; ಅದು ತಾನು ಉದಾತ್ತಗೊಳಿಸುವ ದೇಶಭಕ್ತಿಯ ಆದರ್ಶಗಳಿಂದಾಗಿ ಔನ್ನತ್ಯಕ್ಕೇರುತ್ತದೆ."

ಸೂಕ್ತ ಶಿಕ್ಷಕರು ದೊರೆತರೆ ನಮ್ಮ ಮಕ್ಕಳಿಗೆ ಶ್ರಮಗೌರವವನ್ನು ಕಲಿಸಲಾಗುತ್ತದೆ. ಅವರು ಅದನ್ನು ತಮ್ಮ ಬೌದ್ಧಿಕ ವಿಕಾಸದ ಅವಿಚ್ಛಿನ್ನ ಅಂಗವನ್ನಾಗಿ ಮತ್ತು ಮಾರ್ಗವಾಗಿ ನೋಡಲು ಕಲಿಯುತ್ತಾರಲ್ಲದೆ ತಮ್ಮ ಶ್ರಮದ ಮೂಲಕ ತಮ್ಮ ತರಬೇತಿಗೆ ಹಣಸಂದಾಯ ಮಾಡುವುದು ದೇಶಭಕ್ತಿಯ ಕಾರ್ಯವೆಂದೇ ಭಾವಿಸುತ್ತಾರೆ. ನನ್ನ ಚಿಂತನೆಯಪ್ರಧಾನ ನೆಲೆಯೆಂದರೆ ಕರಕುಶಲಕಲೆಯನ್ನು ನಾವು ಕಲಿಸಬೇಕು. ಆದರೆ ಕೇವಲ ಉತ್ಪಾದನಾಕಾರ್ಯವಾಗಿ ಅಲ್ಲ; ವಿದ್ಯಾರ್ಥಿಗಳ ಬೌದ್ಧಿಕ ಬೆಳವಣಿಗೆಗಾಗಿ ಅದು ಅಗತ್ಯ. ಏಳರಿಂದ ಹದಿನಾಲ್ಕು ವರ್ಷದ ಮಕ್ಕಳ ಜವಾಬ್ದಾರಿಯನ್ನು ಸರಕಾರವು ತೆಗೆದುಕೊಳ್ಳುವುದಾದರೆ ಮತ್ತು ಉತ್ಪಾದನಾ ಕಾರ್ಯದ ಮೂಲಕ ಅವರ ದೇಹ ಮತ್ತು ಮನಸ್ಸುಗಳಿಗೆ ತರಬೇತಿ ನೀಡುವುದಾದರೆ, ಆಗಲೂ ಸಹ ಶಾಲೆಗಳು ಸ್ವಯಂ ಪೋಷಿತವಾಗದಿದ್ದರೆ ಶಿಕ್ಷಕರು ಮೂರ್ಖರಾಗಿರಬೇಕು ಮತ್ತು ಶಾಲೆಗಳು ವಂಚನೆ ಮಾಡುತ್ತಿರಬೇಕು.

ಪ್ರತಿಯೊಬ್ಬ ಹುಡುಗ ಮತ್ತು ಹುಡುಗಿಯೂ ಕೆಲಸ ಮಾಡುತ್ತಾರೆಂದು ಕಲ್ಪಿಸಿಕೊಳ್ಳಿ. ಒಂದು ಯಂತ್ರದಂತೆ ಅಲ್ಲ. ಒಂದು ಜಾಣಘಟಕವಾಗಿ ಮತ್ತು ಒಬ್ಬ ಪರಿಣತರ ಮಾರ್ಗದರ್ಶನದಲ್ಲಿ ಕಾರ್ಪೊರೇಟ್ ಶೈಲಿಯಲ್ಲಿ ಕೆಲಸ ಮಾಡುವುದು. ಮೊದಲ ವರ್ಷ ಬಿಟ್ಟುಬಿಡೋಣ. ನಂತರದ ವರ್ಷಗಳಲ್ಲಿ ಅವರ ಪರಿಶ್ರಮದ ಬೆಲೆಯು ಗಂಟೆಗೆ ಅಂದಾಜು ಒಂದು ಆಣೆ ಇರುತ್ತದೆ. ಹಾಗಾಗಿ ತಿಂಗಳ 26 ಕೆಲಸದ ದಿನಗಳಿಗೆ ಪ್ರತಿದಿನ 4 ಗಂಟೆಯಂತೆ ತಿಂಗಳಿಗೆ ಪ್ರತಿ ಮಗುವೂ 6 ರೂಪಾಯಿ ಮತ್ತು 8 ಆಣೆಗಳನ್ನು ಗಳಿಸುತ್ತದೆ. ಈಗಿರುವ ಒಂದೇ ಪ್ರಶ್ನೆಯೆಂದರೆ ಕೋಟಿಗಟ್ಟಲೆ ಮಕ್ಕಳನ್ನು ಇಷ್ಟೇ ಲಾಭಯುತವಾಗಿ ನಿಯೋಗಿಸುವ ಸಾಧ್ಯತೆ ಇದೆಯೇ? ಆದರೆ ಸಂಪೂರ್ಣವಾಗಿ ಒಂದು ವರ್ಷದ ತರಬೇತಿಯ ನಂತರವೂ ನಮ್ಮ ಮಕ್ಕಳ ಅದಮ್ಯ ಚೇತನವನ್ನು ನಾವು ಗಂಟೆಗೆ ಒಂದು ಆಣೆಯಷ್ಟು ಮೌಲ್ಯದ ಮಾರುಕಟ್ಟೆಯ ಸರಕನ್ನಾಗಿ ಪರಿವರ್ತಿಸಲು ಸಾಧ್ಯವಾಗದಿದ್ದರೆ ಹಿರಿಯರಾಗಿ ನಾವು ಬೌದ್ಧಿಕವಾಗಿ ದಿವಾಳಿಯಾಗಿದ್ದೇವೆಂದೇ ಲೆಕ್ಕ.ನಮ್ಮ ಹಳ್ಳಿಗಳಲ್ಲಿ ಹಳ್ಳಿಗರು ಗಂಟೆಗೆ ಒಂದು ಆಣೆಯ ದರದಲ್ಲಿ ಎಲ್ಲಿಯೂ ಗಳಿಸುತ್ತಿಲ್ಲವೆನ್ನುವುದು ಕೂಡ ನನಗೆ ಗೊತ್ತಿದೆ. ಇದಕ್ಕೆ ಕಾರಣವೆಂದರೆ ನಾವು ಉಳ್ಳವರು ಮತ್ತು ಇಲ್ಲದವರ ನಡುವೆ ಇರುವ ತಾರತಮ್ಯವನ್ನು ನಮ್ಮೊಳಗೇ ಒಪ್ಪಿಕೊಂಡಿದ್ದೇವೆ ಹಾಗೂ ನಗರಿಗರೂ ಸಹ, ಬಹುಶಃ ಅವರಿಗೇ ತಿಳಿಯದಂತೆ ಬ್ರಿಟಿಷರಿಂದ ಪ್ರಾರಂಭಗೊಂಡ ಹಳ್ಳಿಗಳ ಶೋಷಣೆಯ ಜೊತೆ ತಾವೂ ಸೇರಿಕೊಂಡುಬಿಟ್ಟಿದ್ದಾರೆ.

ಹರಿಜನ್, 11–9–'37

## 16

## ಸ್ವಯಂ ಪೋಷಿತ ಶಿಕ್ಷಣದ ಕುರಿತಾಗಿ ಇನ್ನಷ್ಟು ಭಾಷಣಗಳು

ಗಾಂಧೀಜಿಯವರು ತಮ್ಮ ಕ್ಷೀಣಿಸುತ್ತಿದ್ದ ಆರೋಗ್ಯದ ನಡುವೆಯೂ, ತಮಗೆ ವಿಶ್ರಾಂತಿಯ ಅಗತ್ಯವಿದ್ದಾಗ್ಯೂ ಕೂಡ ತಮ್ಮ ಕನಸಿನ ಯೋಜನೆಯಾದ ಸ್ವಯಂ ಪೋಷಿತ ಶಿಕ್ಷಣದ ಸಿದ್ಧಾಂತದ ಬಗ್ಗೆ ಆಲೋಚಿಸಿರುವ ಮತ್ತು ಈ ಹೊಸ ಪ್ರಯೋಗವನ್ನು ಯಶಸ್ವಿಯಾಗಿಸುವಲ್ಲಿ ತನ್ನ ಕೊಡುಗೆಯನ್ನು ನೀಡಬಯಸುವ ಯಾರಾದರೂ ಸರಿ, ಅವರ ಜೊತೆಗೆ ಸಂವಾದ ಮಾಡುವಲ್ಲಿ

ಅವರು ಉತ್ಸುಕರಾಗಿರುತ್ತಿದ್ದರು. ಅವರ ಆರೋಗ್ಯದ ಕಾರಣದಿಂದಾಗಿ ಅಂಥ ಸಂವಾದಗಳು ಕೆಲವೇ ಇದ್ದವು ಮತ್ತು ಅವು ಕೂಡ ಬಹಳ ಸಂಕ್ಷಿಪ್ತವಾಗಿದ್ದವು. ಆದರೂ ಆಗಾಗ ಹೊಸದೊಂದು ಹೊಳಹು ಉದಯಿಸುತ್ತಿತ್ತು ಮತ್ತು ಅವರು ಮಾತನಾಡಿದಾಗೆಲ್ಲಾ ಏನಾದರೂ ಹೊಸ ಸಲಹೆ ಇರುತ್ತಿತ್ತು ಮತ್ತು ಅದು ಹೊಸ ಬೆಳಕನ್ನು ಚೆಲ್ಲುತ್ತಿತ್ತು. ಉದಾಹರಣೆಗೆ, ಆದಷ್ಟು ಬೇಗ ಮದ್ಯ ನಿಷೇಧವನ್ನು ಅನುಷ್ಠಾನಗೊಳಿಸುವ ಅಗತ್ಯದಿಂದಾಗಿ ಸ್ವಯಂ ಪೋಷಿತ ಶಿಕ್ಷಣದ ಪರಿಕಲ್ಪನೆ ಹುಟ್ಟಿದೆ ಎನ್ನುವ ಆಲೋಚನೆಯ ವಿರುದ್ಧ ಅವರು ಎಲ್ಲರಿಗೆ ಎಚ್ಚರಿಕೆ ನೀಡಿದ್ದರು. " ಈ ಎರಡು ಸಂಗತಿಗಳೂ ಸ್ವತಂತ್ರ ಪರಿಕಲ್ಪನೆಗಳು" ಎಂದವರು ಹೇಳಿದ್ದರು. " ಬೇರೆ ಆದಾಯ ಇರಲಿ ಇಲ್ಲದಿರಲಿ, ಶಿಕ್ಷಣ ಕೊಡಲಿ , ಕೊಡದಿರಲಿ ಮದ್ಯ ನಿಷೇಧವನ್ನು ಮಾತ್ರ ಜಾರಿಗೊಳಿಸಲೇಬೇಕು ಎನ್ನುವ ದೃಢನಿಶ್ಚಯದಿಂದ ಹೊರಡಬೇಕು.ಇದೇ ಮಾದರಿಯಲ್ಲಿಭಾರತ ದೇಶದ ಹಳ್ಳಿಗಳ ಇಂದಿನ ಅಗತ್ಯವನ್ನು ನೋಡಿದರೆ ನಮ್ಮ ಗ್ರಾಮೀಣ ಶಿಕ್ಷಣವನ್ನು ಕಡ್ಡಾಯ ಮಾಡಬೇಕೆಂದರೆ ಅದನ್ನು ಸ್ವಯಂಪೋಷಿತ ವಿಧಾನದಲ್ಲಿಯೇ ಮಾಡಬೇಕೆಂಬ ಸ್ಥಿರ ನಂಬಿಕೆಯಿಂದ ಪ್ರಾರಂಭಿಸಬೇಕು."

ಚರ್ಚೆಯನ್ನು ಆರಂಭಿಸಿದ ಶಿಕ್ಷಣತಜ್ಞರು "ಮೊದಲಿಗೆ  ನನ್ನೊಳಗೆ ಆಳದಲ್ಲಿ ಈ ವಿಚಾರದಲ್ಲಿ ವಿಶ್ವಾಸವಿದೆ. " ಎಂದು ಹೇಳಿದರು. "ಮದ್ಯ ನಿಷೇಧವು ತನ್ನಷ್ಟಕ್ಕೆ ತಾನೇ ಸಂಪೂರ್ಣವಾದುದು. ಅದನ್ನು ನಾನು ಪೂರ್ಣ ಸ್ವರೂಪದ ಶಿಕ್ಷಣ ಎಂದೇ ಪರಿಗಣಿಸುತ್ತೇನೆ. ಹಾಗಾಗಿ ಮದ್ಯ ನಿಷೇಧವನ್ನು ಯಶಸ್ವಿಯಾಗಿಸಲು ಶಿಕ್ಷಣವನ್ನು ಬಲಿಕೊಡಬಹುದು ಎಂದು ನಂಬುತ್ತೇನೆ, ಆದರೆ ಎರಡನೆಯದರ ಬಗ್ಗೆ ನನಗೆ ನಂಬಿಕೆ ಇದೆಯೆಂದು ಹೇಳಲಾರೆ. ಶಿಕ್ಷಣವನ್ನು ಸ್ವಯಂ ಪೋಷಿತವನ್ನಾಗಿ ಮಾಡಬಹುದೆಂದು ನಂಬಲು ನಾನಿನ್ನೂ ಸಿದ್ಧನಿಲ್ಲ."

"ಅಲ್ಲಿಯೂ ನೀವು ಗಾಢನಂಬಿಕೆಯಿಂದಲೇ ಪ್ರಾರಂಭಿಸಬೇಕೆನ್ನುವುದು ನನ್ನ ಆಶಯ. ನೀವು ಅದರ ವಿವರಗಳನ್ನು ಬೆಳೆಸುತ್ತಾ ಹೋದಂತೆ ಅದರ ಮಾರ್ಗವು ತಂತಾನೇ ಕಾಣಸಿಗುತ್ತದೆ. ನಾನು ಇಳಿವಯಸ್ಸಿನಲ್ಲಿ ಇದರ ಅಗತ್ಯವನ್ನು ಮನಗಂಡಿದ್ದು ನನಗೇ ವಿಷಾದಕರವೆನಿಸಿದೆ. ಇಲ್ಲದಿದ್ದರೆ ಇದಕ್ಕೆ ಸಂಬಂಧಿಸಿದ ಪ್ರಯೋಗವನ್ನು ನಾನೇ ಮಾಡುತ್ತಿದ್ದೆ. ಈಗಲೂ ಕೂಡ ದೈವೇಚ್ಛೆಯಿದ್ದರೆ ಶಿಕ್ಷಣವು ಸ್ವಯಂಪೋಷಿತವಾಗಲು ಸಾಧ್ಯವೆಂದು ತೋರಿಸಲು ನನ್ನಿಂದಾದಷ್ಟೂ ಮಾಡುತ್ತೇನೆ. ಆದರೆ ಇಷ್ಟು ವರ್ಷಗಳಲ್ಲಿ ನನ್ನ ಸಮಯವು ಬೇರೆಯ ಕೆಲಸಗಳಿಗೆ ಬಳಕೆಯಾಗಿತ್ತು; ಅವು ಕೂಡ ಬಹುಶಃ ಇದರಷ್ಟೇ ಮುಖ್ಯವಾದುವಾದರೂ ನಾನು ಸೇವಾಗ್ರಾಮದಲ್ಲಿದ್ದ ದಿನಗಳಲ್ಲಿ ಈ ಬಲವಾದ ನಂಬಿಕೆ ನನ್ನಲ್ಲುಂಟಾಯಿತು. ಮಕ್ಕಳ ಮನಸ್ಸಿಗೆ ಪ್ರಚೋದನೆಯನ್ನು ನೀಡದೆ ಮತ್ತು ವಿಕಸಿಸಲು ಅವರಿಗೆ ಅನುವು ಮಾಡಿಕೊಡದೆ, ಇಷ್ಟು ವರ್ಷಗಳ ಕಾಲ ಕೇವಲ ಎಲ್ಲ ಬಗೆಯ ಮಾಹಿತಿಗಳನ್ನು ಅವರಿಗೆ ತುರುಕುವುದರಲ್ಲಿಯೇ ನಾವು ನಿರತರಾಗಿದ್ದೆವು. ಈಗ ಅದನ್ನು ಒಡನೆಯೇ ನಿಲ್ಲಿಸಿ ಮಗುವಿಗೆ ಸರಿಯಾದ ರೀತಿಯ ಶಿಕ್ಷಣ – ಅಂದರೆ ಶ್ರಮಶಿಕ್ಷಣ – ನೀಡಲು ಪ್ರಾರಂಭಿಸೋಣ. ಆದರೆ ಇನ್ನೊಂದು ಹೆಚ್ಚುವರಿ ಚಟುವಟಿಕೆಯಾಗಿ ಅಲ್ಲ ; ಅದನ್ನೇ ಬೌದ್ಧಿಕ ಬೆಳವಣಿಗೆಗೆ ಪ್ರಮುಖ ಸಾಧನವಾಗಿ ಬಳಸುವುದು."

"ಅದು ನನಗೆ ಅರ್ಥವಾಗುತ್ತದೆ. ಆದರೆ ಅದೇಕೆ ಶಾಲೆಗೆ ಹಣವನ್ನೂ ಗಳಿಸಿಕೊಡಬೇಕು?"

" ಇದರ ಮೌಲಿಕತೆಯಿರುವುದೇ ಇಲ್ಲಿ. ಮಗುವಿಗೆ 14 ವರ್ಷಗಳಾದಾಗ, ಅಂದರೆ ಶಾಲೆಯಲ್ಲಿ ಏಳು ವರ್ಷಗಳ ಕಾಲ ಕಲಿತು ಹೊರಗೆ ಹೋಗುವ ಹೊತ್ತಿಗೆ ಅವನನ್ನು ಗಳಿಸುವ ಸಾಧನವನ್ನಾಗಿ ರೂಪಿಸಿರಬೇಕು. ಈಗಲೂ ಕೂಡ ಬಡ ಪಾಲಕರ ಮಕ್ಕಳು ಅವರ ತಂದೆ ತಾಯಿಯರಿಗೆ ಸಹಾಯ ಮಾಡುತ್ತಿರುತ್ತಾರೆ. ಅವರ ಮನಸ್ಸಿನಲ್ಲಿ ಇರುವ ಆಲೋಚನೆಯೆಂದರೆ, "ನಾನು ಅವರಿಗೆ ಸಹಾಯ ಮಾಡದಿದ್ದರೆ ಅವರೇನು ತಿನ್ನುತ್ತಾರೆ ಮತ್ತು ಅವರು ನನಗೇನು ತಿನ್ನಲು ಕೊಡಲು ಸಾಧ್ಯ?"ಇದನ್ನೇ ನಾವು

ನೈಜ ಶಿಕ್ಷಣ ಎನ್ನಬಹುದು.ಸರಕಾರವು ಮಗುವನ್ನು 7 ವರ್ಷವಾಗಿರುವಾಗ ಸುಪರ್ದಿಗೆ ತೆಗೆದುಕೊಂಡು 14 ವರ್ಷವಾದಾಗ ಗಳಿಕೆಗೆ ಸಮರ್ಥನನ್ನಾಗಿ ರೂಪಿಸಿ ಹಿಂದಿರುಗಿಸುತ್ತದೆ. ನೀವು ಶಿಕ್ಷಣವನ್ನು ನೀಡುತ್ತ ಜೊತೆಜೊತೆಗೆ ನಿರುದ್ಯೋಗ ಸಮಸ್ಯೆಯನ್ನೂ ಪರಿಹರಿಸಿಬಿಡುವಿರಿ. ನೀವು ಹುಡುಗರನ್ನು ಒಂದಲ್ಲ ಒಂದು ಕಸುಬಿಗೆ ತರಬೇತಿ ನೀಡುವಿರಿ. ಈ ವಿಶೇಷ ವೃತ್ತಿಯ ಕೇಂದ್ರಬಿಂದುವಿನ ಸುತ್ತ ಅವನ ಮನಸ್ಸು, ದೇಹ, ಬರಹ ಮತ್ತು ಕಲಾಪ್ರತಿಭೆ ಇತ್ಯಾದಿಗಳೂ ಅರಳುತ್ತವೆ. ಆತ ತಾನು ಕಲಿಯುವ ಕರಕುಶಲಕಲೆಯಲ್ಲಿ ನಿಪುಣನಾಗುತ್ತಾನೆ."

"ಆದರೆ ಒಬ್ಬ ಹುಡುಗ ಖಾದಿ ತಯಾರಿಸುವ ಕಲೆ ಮತ್ತು ತಾಂತ್ರಿಕತೆಯನ್ನು ಆರಿಸಿಕೊಳ್ಳುತ್ತಾನೆ ಎಂದಿಟ್ಟುಕೊಳ್ಳಿ. ಅದನ್ನು ಕಲಿಯಲು ಪೂರ್ತಿ ಏಳು ವರ್ಷಗಳು ಬೇಕಾಗುತ್ತವೆಯೇ?"

"ಹೌದು. ಅವನ ಕಲಿಕೆ ಕೇವಲ ಯಾಂತ್ರಿಕವಾಗಿಲ್ಲದಿದ್ದರೆ ಬೇಕಾಗುತ್ತದೆ. ಇತಿಹಾಸ ಇಲ್ಲವೇ ಭಾಷೆಯನ್ನು ಕಲಿಯಲು ನಾವೇಕೆ ಅನೇಕ ವರ್ಷಗಳನ್ನು ಮೀಸಲಿಡುತ್ತೇವೆ? ಇಲ್ಲಿಯವರೆಗೆ ಕೃತಕವಾಗಿ ಪ್ರಾಮುಖ್ಯವನ್ನು ನೀಡಿರುವ ವಿಷಯಗಳಿಗಿಂತ ಕರಕುಶಲ ಕಲೆಗಳು ಕಡಿಮೆ ದರ್ಜೆಯವೇ?"

"ಆದರೆ ನೀವು ಪ್ರಮುಖವಾಗಿ ನೂಲುವುದು ಮತ್ತು ನೇಯುವುದರ ಬಗ್ಗೆ ಮಾತ್ರ ಮಾತನಾಡುತ್ತಿದ್ದೀರಿ. ನೀವು ಈ ಶಾಲೆಗಳನ್ನು ಬರೀ ನೇಕಾರಿಕೆ ಶಾಲೆಗಳನ್ನಾಗಿ ಪರಿವರ್ತಿಸಲು ಬಯಸುತ್ತೀರೆಂದು ಇದರಿಂದ ಸ್ಪಷ್ಟವಾಗುತ್ತದೆ."ಒಂದು ಮಗುವಿಗೆ ನೇಕಾರಿಕೆ ಕುರಿತಾಗಿ ಯಾವುದೇ ಅಭಿರುಚಿ ಇಲ್ಲದಿರಬಹುದು. ಬೇರೆ ಯಾವುದೋ ಕೌಶಲ ಅವರಿಗೆ ಸರಿಹೊಂದಬಹುದು.

"ಖಂಡಿತ ಅದು ಸಾಧ್ಯವಿದೆ. ಹಾಗಾದರೆ ಅವನಿಗೆ ನಾವು ಬೇರೊಂದು ಕರಕುಶಲ ಕಲೆಯನ್ನು ಕಲಿಸೋಣ. ಆದರೆ ಒಂದು ಶಾಲೆಯಲ್ಲಿ ಅನೇಕ ಕರಕುಶಲಕಲೆಗಳು ಇರುವುದಿಲ್ಲ. ಇಪ್ಪತ್ತ ಐದು ಹುಡುಗರಿಗೆ ಒಬ್ಬ ಶಿಕ್ಷಕರು ಇರುವ ಆಲೋಚನೆ ನಮಗಿದೆ. ಎಷ್ಟು ಮಂದಿ ಶಿಕ್ಷಕರು ಇರುತ್ತಾರೋ ಅಷ್ಟು ತರಗತಿ ಅಥವಾ ಶಾಲೆಗಳನ್ನು ನಡೆಸಬಹುದು. ಜೊತೆಗೆ ಪ್ರತಿ ಶಾಲೆಗೂ ಬೇರೆ ಬೇರೆ ಕರಕುಶಲ ಕಲೆಯನ್ನು ಅಂದರೆ – ಮರಗೆಲಸ, ಕಮ್ಮಾರಿಕೆ, ಚರ್ಮ ಸಂಸ್ಕರಣ ಅಥವಾ ಚಪ್ಪಲಿ ತಯಾರಿಕೆ – ನೀಡಬಹುದು. ಆದರೆ ಈ ಪ್ರತಿಯೊಂದು ಕರಕುಶಲ ಕಲೆಯ ಶಿಕ್ಷಣದ ಮೂಲಕ ನಾವು ಮಗುವಿನ ಮನಸ್ಸನ್ನು ಅರಳುವಂತೆ ಮಾಡುವುದೇ ಉದ್ದೇಶ ಎನ್ನುವುದು ನಿಮ್ಮ ಗಮನದಲ್ಲಿರಲಿ. ಇನ್ನೊಂದು ವಿಷಯವನ್ನು ಒತ್ತಿ ಹೇಳಬೇಕು. ನೀವು ನಗರಗಳನ್ನು ಪಕ್ಕಕ್ಕಿಟ್ಟು ಹಳ್ಳಿಗಳ ಕಡೆ ಗಮನ ಹರಿಸಬೇಕು. ಆ ಕಾರಣದಿಂದಾಗಿ ನೀವು ಇಟ್ಟಿಗೆ ತಯಾರಿಕೆಯಂತಹ ವಿಷಯಗಳನ್ನು ಸೇರಿಸಲಾಗುವುದಿಲ್ಲ. ಅವರು ಮೆಕ್ಯಾನಿಕಲ್ ಅಥವಾ ಸಿವಿಲ್ ಎಂಜಿನಿಯರಿಂಗ್ ತರಹದ ವೃತ್ತಿಯನ್ನು ಆರಿಸಿಕೊಳ್ಳುವುದಾದರೆ, ಏಳು ವರ್ಷಗಳ ಶಿಕ್ಷಣದ ನಂತರ ಆ ರೀತಿಯ ಉನ್ನತ ಶಿಕ್ಷಣದ ಮತ್ತು ವಿಶೇಷ ಪರಿಣತಿ ನೀಡುವ ಕಾಲೇಜುಗಳಿಗೆ ಅವರು ಪ್ರವೇಶ ಪಡೆಯಬಹುದು."

" ಇನ್ನೊಂದು ಮಾತು ಹೇಳಬೇಕು. ನಾವು ಶಿಕ್ಷಣವನ್ನು ಶ್ರಮದ ತರಬೇತಿಯಿಂದ ಬೇರ್ಪಡಿಸಿ ನೋಡುವುದರಿಂದ ಗ್ರಾಮೀಣ ಕುಶಲ ಕಲೆಗಳು ತುಚ್ಛ ಎನ್ನುವ ಭಾವನೆ ಬಂದಿರುವುದು ಸಹಜವೇ ಆಗಿದೆ. ನೂಲುವವರು, ನೇಕಾರರು, ಬಡಗಿಗಳು ಮತ್ತು ಮೋಚಿಗಳು ಇವರುಗಳು ಕೆಳಜಾತಿಗೆ ಸೇರಿದವರು ಎನ್ನುವ ತಿರುಚಲಾದ ವರ್ಣ ಧರ್ಮದ ಪರಿಕಲ್ಪನೆಯ ಕಾರಣದಿಂದಾಗಿ ಶಾರೀರಿಕ ಶ್ರಮವು ಕೀಳು ಮಟ್ಟದ್ದು ಎಂದು ಪರಿಗಣಿತವಾಗುತ್ತಿದೆ. ಹೀಗೆ ಕೌಶಲಗಳನ್ನು ಕಡಿಮೆ ದರ್ಜೆಯದು ಎಂದು ತಿಳಿಯುವ ಕ್ರೂರ ಪದ್ಧತಿಯ ಕಾರಣದಿಂದಾಗಿ ನಮ್ಮಲ್ಲಿ ಕ್ರಾಂಪ್ಟನ್ ಮತ್ತು ಹರ್ಗ್ರೀವ್ಸ್ ಗಳಂಥ ಕಂಪನಿಗಳಿಲ್ಲ. ಅಕ್ಷರ ಕಲಿತವರಿಗೆ ಇರುವಂತೆ ಅವರಿಗೆ ನಾವೇನಾದರೂ ಮೊದಲಿನಿಂದಲೂ ಸ್ವತಂತ್ರ ಸ್ಥಾನಮಾನವನ್ನು ನೀಡಿದ್ದರೆ ನಮ್ಮ ಕುಶಲ

ಕರ್ಮಿಗಳಲ್ಲಿಯೂ ನಮಗೆ ಅದ್ಭುತ ಆವಿಷ್ಕಾರಕರು (inventors) ಹೊರಹೊಮ್ಮುತ್ತಿದ್ದರು. ಬಟ್ಟೆಯನ್ನು ಉತ್ಪಾದಿಸಲು ಆವಿಷ್ಕರಿಸಿದ 'ಸ್ಪಿನ್ನಿಂಗ್ ಜೆನ್ನಿ' ಮುಂದೆ ಜಲಶಕ್ತಿ ಮತ್ತತರ ಯಂತ್ರಗಳಿಗೆ ಕಾರಣವಾಗಿ, ಅದರ ಪರಿಣಾಮವಾಗಿ ಸಾವಿರಾರು ಮಂದಿ ಕುಶಲಕರ್ಮಿಗಳ ನೆಲೆ ತಪ್ಪಿಸಿತು. ನನ್ನ ಚಿಂತನೆಯಲ್ಲಿ ಅದು ಯಂತ್ರರಾಕ್ಷಸನ ವಿಕೃತತೆ. ಕುಶಲಕಲೆಗಳ ಗಾಢವಾದ ಮತ್ತು ಆಳವಾದ ಕಲಿಕೆಯು ಅವರಲ್ಲಿ ಹೊತ್ತಿಸಬಲ್ಲ ಆವಿಷ್ಕಾರದ ಜ್ಯೋತಿಯು ಹಳ್ಳಿಗಳ ಒಟ್ಟು ಒಳಿತಿಗೆ ಬೇಕಿರುವ ಹೊಸ ಪರಿಹಾರಗಳನ್ನು ಹುಡುಕಬಹುದೆನ್ನುವ ಕಾರಣಕ್ಕಾಗಿ ನಾವು ನಮ್ಮ ಗಮನವನ್ನು ಹಳ್ಳಿಗಳ ಮೇಲೆಯೇ ಕೇಂದ್ರೀಕರಿಸಿದ್ದೇವೆ."
ಹರಿಜನ್, 18–9–'37

## 17

## ಸ್ವಯಂ ಪೋಷಿತ ಶಾಲೆಗಳು

"ನಮ್ಮ ಸಂಪನ್ಮೂಲಗಳ ಮೇಲೆ ಜನಸಂಖ್ಯೆಯ ಒತ್ತಡನಿಜಕ್ಕೂ ನಮ್ಮ ಆರ್ಥಿಕ ಪರಿಸ್ಥಿತಿಯ ಬಹು ಮುಖ್ಯ ಅಂಶವೆನ್ನಬಹುದು. ಉದಾಹರಣೆಗೆ, ಭಾರತದಲ್ಲಿ ಅನ್ವೇಷಣೆಗೆ ಇನ್ನೂ ಒದಗಿರದ ಸವಿಸ್ತಾರವಾದ ಭೂಪ್ರದೇಶವಿಲ್ಲ. ನಮಗೆ ಸಮೃದ್ಧವಾದ ವಸಾಹತು ಮತ್ತು ಬಂಡವಾಳಗಳ ಲಭ್ಯತೆ ಇಲ್ಲ. ಹಾಗಾಗಿ ನಮ್ಮ ಸಂಪನ್ಮೂಲಗಳ ಸದ್ಬಳಕೆಯ ಹಕ್ಕು ಆ ಕಾರ್ಯವನ್ನು ಚೆನ್ನಾಗಿ ಮಾಡಲು ತರಬೇತಿಗೊಂಡಿರುವವರಿಗೆ ಮಾತ್ರವೇ ಇರಬೇಕು. ಹರಡಿ ಹಂಚಿಹೋದ ಭೂಮಿಯ ನೂರು ತುಂಡುಗಳನ್ನು ನೂರು ಮಂದಿ ಕೃಷಿ ಮಾಡಿದರೆ ಅವರು ಐವತ್ತು ಮಂದಿಗೆ ಬೇಕಿರುವಷ್ಟು ಆಹಾರವನ್ನು ಉತ್ಪಾದಿಸುತ್ತಾರೆ. ಆದರೆ ಈ ತುಂಡುಭೂಮಿಗಳನ್ನು ಒಟ್ಟುಗೂಡಿಸಿ ಅದನ್ನು ಇಪ್ಪತ್ತು ಜನರು ಕೃಷಿ ಮಾಡಿದರೆ – ಅದರಲ್ಲಿ ಒಬ್ಬರು ಗೊಬ್ಬರದ ಪರಿಣತರು, ಒಬ್ಬರು ಸಸ್ಯ ತಳಿಪರಿಣತರು, ಒಬ್ಬರು ನೀರಾವರಿ ಎಂಜಿನಿಯರ್ ಇರಬೇಕು – ಆಗ ಅದೇ ಭೂಮಿಯು ಉತ್ಪಾದಿಸುವ ಆಹಾರ ನೂರು ಜನರಿಗೆ ಸಾಕಾಗುತ್ತದೆ. ರೈತ ಕಾರ್ಮಿಕರನ್ನು ಅವರ ಕೌಟುಂಬಿಕ ಬದುಕನ್ನು ಅಸ್ಥಿರಗೊಳಿಸದೆ, ಅವರ ಸ್ವಾತಂತ್ರ್ಯವನ್ನು ಮೊಟಕುಗೊಳಿಸದೆ ಉತ್ಪಾದಕತೆಯನ್ನು ಅಧಿಕಗೊಳಿಸಲು ನೂತನ ಮಾರ್ಗಗಳು ಆವಿಷ್ಕಾರಗೊಂಡಿರುವ ಕಾರಣದಿಂದಾಗಿ ಹೆಚ್ಚು ಮಂದಿ ಕೆಲಸ ಮಾಡದಿರುವಂತೆ ನಿರ್ಣಯಿಸುವಖಚಿತ ಅಗತ್ಯವೀಗ ತಲೆದೋರಿದೆ. ಜನರನ್ನು ಐವತ್ತು ವರ್ಷಗಳಿಗೆ ನಿವೃತ್ತಿ ಹೊಂದುವಂತೆ ಮಾಡುವ ಪರಿಹಾರವುವ್ಯರ್ಥ ಮತ್ತು ನಿರರ್ಥಕ. ಏಕೆಂದರೆಸಾಮಾನ್ಯವಾಗಿ ಯಾರೊಬ್ಬರ ಮನಸ್ಸು ಮತ್ತು ದೇಹಗಳು ಅದಾದ ನಂತರವೇ ತೀಕ್ಷ್ಣವಾಗಿರುತ್ತವೆ. ಸರಿಯಾದ ಮಾರ್ಗವೆಂದರೆ ಅವರು ಸೂಕ್ತ ತರಬೇತಿಯನ್ನು ಪಡೆದು ಸಿದ್ಧರಾಗುವವರೆಗೆ ಅವರು ವೃತ್ತಿಜೀವನವನ್ನು ಪ್ರವೇಶಿಸುವುದನ್ನು ತಡೆಯುವುದು."

" ನಾವು ವಿಶಾಲ ದೃಷ್ಟಿಕೋನದಿಂದ ಆಲೋಚಿಸಿದರೆ. ಇಲ್ಲಿನ ಕೆಲಸಗಾರರು ತುಂಬ ಮೊದಲೇ ವೃತ್ತಿಜೀವನವನ್ನು ಪ್ರಾರಂಭಿಸುವುದುಭಾರತದ ಆರ್ಥಿಕ ಅವನತಿಗೆ ಮುಖ್ಯ ಕಾರಣ. ಬಡಗಿಯು ತನ್ನ ಮಗನನ್ನು ಎಷ್ಟೊಂದು ಬೇಗ ಕೆಲಸಕ್ಕೆ ಹಚ್ಚುತ್ತಾನೆಂದರೆ ಆ ಹುಡುಗ 12 ವರ್ಷಗಳಾಗುವ ಹೊತ್ತಿಗೆ ಗರಿಷ್ಠ ಗಳಿಕಾ ಸಾಮರ್ಥ್ಯವನ್ನು ಪಡೆದು, ಮದುವೆಯಾಗಿ, ತನ್ನದೇ ಸ್ವಂತ ಕಸುಬನ್ನು ಪ್ರಾರಂಭಿಸುತ್ತಾನೆ. ಹೀಗಾಗಿ ಉತ್ಪಾದನೆಯಲ್ಲಿ ಮತ್ತು ವಿತರಣೆಯಲ್ಲಿ ಹೊಸ ವಿಧಾನಗಳಿಗೆ ತನ್ನನ್ನು ತಾನು ತೆರೆದುಕೊಳ್ಳುವುದಿಲ್ಲ. ಕೈಗಾರಿಕೆಯ ಸ್ವರೂಪದ ಶಿಷ್ಯವೃತ್ತಿಗೆ ಪಕ್ಕಾದ ಅಪ್ರಬುದ್ಧ ಮನಸ್ಸು ವಿಕಾಸಗೊಳ್ಳದೆ ಕುಂಠಿತವಾಗಿ ಪಳೆಯುಳಿಕೆಯಂತಾಗುತ್ತದೆ ಹಾಗೂ ತನ್ನ ಕೆಲಸದ ಆರ್ಥಿಕ ಮಹತ್ವವನ್ನೂ ಗ್ರಹಿಸಿರುವುದಿಲ್ಲ.ಅಂಥ ಕಾರ್ಮಿಕನನ್ನು ಯಾರು ಬೇಕಾದರೂ ಶೋಷಣೆ ಮಾಡಬಹುದು.ಅವನು ತನ್ನದೇ ಆಸಕ್ತಿಯ ಸೀಮಿತ ವಲಯದಲ್ಲಿ ಹೊಟ್ಟೆಹೊರೆದುಕೊಳ್ಳುತ್ತಾ

ಸಂತಾನಾಭಿವೃದ್ಧಿಮಾಡಿಕೊಂಡು ಸಂತೃಪ್ತರಾಗಿ ಇದ್ದುಬಿಡುತ್ತಾನೆ. ಭಾರತ ದೇಶದ ಸಂಕುಚಿತತೆ, ಸಂತೃಪ್ತಿ, ನಿರಾಶಾವಾದ, ಜಾತಿವಾದ, ಮಾದಕ ದ್ರವ್ಯ ಸೇವನೆ ಮತ್ತು ಕುಡಿತ ಇವೆಲ್ಲವುಗಳ ಮೂಲ ನಿಮಗೆ ಇಲ್ಲೇ ದೊರಕುತ್ತದೆ. ನಾನು ಸಿಲೋನಿನ ( ಇಂದಿನ ಶ್ರೀ ಲಂಕಾ ದೇಶ) ಪ್ಲಾಂಟೇಷನ್‌ಗಳಿಗೆ ಭೇಟಿ ನೀಡಿದಾಗ ನನಗೆ ಆಘಾತ ಆಗಿದ್ದು ಅಲ್ಲಿ ಬಾಲಕಾರ್ಮಿಕತೆಯನ್ನು ಕಂಡಾಗ. ಅಲ್ಲಿ ಶಾಲೆಗಳೇನೋ ಇದ್ದವು. ಆದರೆ ಪೋಷಕರು ಮಕ್ಕಳನ್ನು ಕೆಲಸಕ್ಕೆ ಕಳಿಸುವಲ್ಲಿ ಹೆಚ್ಚು ಆಸಕ್ತರಾಗಿದ್ದರು. ಹಿರಿಯರು ಕಿರಿಯ ಪೀಳಿಗೆಯ ಬಗೆಗಿನ ಜವಾಬ್ದಾರಿಯಿಂದ ನುಣುಚಿಕೊಳ್ಳಲು ನೋಡುತ್ತಿದ್ದರು. ಪ್ರಭುತ್ವದ ಕಾರ್ಯವ್ಯಾಪ್ತಿಯೆಂದರೆ ವೈಯಕ್ತಿಕವಾಗಿ ಪ್ರಯೋಜನಕಾರಿಯಾಗಿರುವ, ಆದರೆ ಸಮುದಾಯಕ್ಕೆ ಹಾನಿಕಾರಕವಾಗಿರುವ ಚಟುವಟಿಕೆಗಳನ್ನು ನಿಯಂತ್ರಿಸುವುದು. ಅಲ್ಲಿರುವ ಪ್ರಾಕೃತಿಕ ಸಂಪನ್ಮೂಲಗಳನ್ನು ಉಪಯುಕ್ತವಾಗಿ ಬಳಸಿಕೊಳ್ಳಲು ಸಾಕಷ್ಟು ಮಾನವ ಸಂಪನ್ಮೂಲಗಳಿಲ್ಲದ ಸಿಲೋನಿನಲ್ಲಿ ಸಹ ಬಾಲ ಕಾರ್ಮಿಕತೆಯು ಸಮರ್ಥನೀಯವಲ್ಲ ; ಮಕ್ಕಳ ಉದ್ಯೋಗಗಳು ವಯಸ್ಕರ ಉದ್ಯೋಗಗಳನ್ನು ಕಸಿದುಕೊಳ್ಳುವ ಭಾರತದಲ್ಲಿಯಂತೂ ಇದು ಮತ್ತಷ್ಟು ನಿಜ."

"ಸರಕುಗಳನ್ನು ಉತ್ಪಾದಿಸಿ ಅವುಗಳನ್ನು ಮಾರುಕಟ್ಟೆಗೆ ತಲುಪಿಸುವ ಸ್ವಯಂ ಪೋಷಿತ ಕಾರಖಾನೆ ಶಾಲೆಗಳು ಶಿಕ್ಷಣ ನೀಡುತ್ತವೆಂದು ನಮ್ಮನ್ನೇ ನಾವೇ ನಂಬಿಸಿಕೊಳ್ಳುವಂಥ ಭ್ರಮೆ ಬೇಡ. ಅದು ಕಾರ್ಯಗತವಾದಾಗ ಅದು ಕೇವಲ ಕಾನೂನುಬದ್ಧ ಬಾಲ್ಯ ಕಾರ್ಮಿಕತೆಯಾಗಿಬಿಡುತ್ತದೆಯಷ್ಟೇ. ಉದಾಹರಣೆಗೆ ಒಂದು ಶಾಲೆ ನೂಲುವುದನ್ನು ಆಯ್ಕೆ ಮಾಡಿಕೊಂಡರೆ ಚಕ್ರವನ್ನು ತಿರುಗಿಸುವ ಕಾರ್ಯವು ಕೆಲದಿನಗಳ ನಂತರ ತಂತಾನೇ ಆಗಲು ತೊಡಗುತ್ತದೆ. ಒಂದು ನೂಲಿನ ಉಂಡೆಗೆ ಎಷ್ಟು ಪ್ರಮಾಣದ ನೂಲು ಬೇಕಾಗುತ್ತದೆ ಎಂದು ಅಧ್ಯಯನ ಮಾಡುವುದರಿಂದ ಅವರು ಗಣಿತ ಕಲಿಯುತ್ತಾರೆ, ಹತ್ತಿಯ ತಳಿಗಳ ಬೆಳವಣಿಗೆ ಮತ್ತು ಸುಧಾರಣೆಗಳನ್ನು ಗಮನಿಸುವುದರಿಂದ ಮಕ್ಕಳು ವಿಜ್ಞಾನ ಮತ್ತು ಇತಿಹಾಸವನ್ನು ಕಲಿಯುತ್ತಾರೆ ಎಂದು ವಾದಿಸುವ "ಹರಿಜನ್" ಪತ್ರಿಕೆಯ ಸಂಪಾದಕರ ಮಾತಿಗೆ ನನ್ನ ಸಹಮತವಿಲ್ಲ.* ಇವುಗಳು ಮನಸ್ಸಿಗೆ ಪ್ರಚೋದನೆಯನ್ನು ನೀಡಬಹುದು ; ಅದು ಕೂಡ ಒಂದು ಇಲ್ಲವೇ ಎರಡು ಬಾರಿ ಮಾತ್ರ. ಆದರೆ ಇದೇ ಚಟುವಟಿಕೆ ಪ್ರತಿದಿನ ವರ್ಷಗಟ್ಟಲೆ ಪುನರಾವರ್ತಿತಗೊಂಡಾಗಅವು ಮಕ್ಕಳ ಮನಸ್ಸಿಗೆ ಜೋಮು ಹಿಡಿಸಿ ಮರಗಟ್ಟಿಸುತ್ತವೆ ಮತ್ತು ಅದೇ ರೂಢಿಯಾಗಿಬಿಡುತ್ತದೆ. ಮಾನವನು ಜೀವಸಂಕುಲದ ವಿಕಾಸದಲ್ಲಿ ಉಳಿದುಕೊಂಡಿರುವುದಕ್ಕೆ ಕಾರಣ ಅವನು ಒಂದು ನಿರ್ದಿಷ್ಟ ಕೌಶಲ ಪಡೆದುಕೊಂಡಿದ್ದರಿಂದಲ್ಲ. ಬದಲಾಗಿ, ಅವನು ಸದಾ ಬದಲಾಗುತ್ತಲೇ ಇರುವ ಸಂಕೀರ್ಣ ವಾಸ್ತವದ ಸವಾಲುಗಳನ್ನು ಎದುರಿಸಲು ಸನ್ನದ್ಧನಾಗಲು ಬೇಕಿರುವ ಸಾಮಾನ್ಯ ಸಂಸ್ಕೃತಿಯ ಸಾಮರ್ಥ್ಯದಿಂದಾಗಿ. ಕಣ್ಣು, ಕಿವಿ ಮತ್ತು ಕೈಗಳು ಪಳಗಬೇಕೆನ್ನುವುದು ಖಂಡಿತ ನಿಜ. ಜೊತೆಗೆ ದೈಹಿಕ ಪರಿಶ್ರಮವನ್ನು ಶಾಲೆಗಳಲ್ಲಿ ಕಡ್ಡಾಯವನ್ನಾಗಿ ಮಾಡಬೇಕು. ಆದರೆ ಯಾವುದನ್ನು ಕೈಗಳ ತರಬೇತಿ ಎಂದು ಕರೆಯಲಾಗುತ್ತದೆಯೋ ಅದು ವಾಸ್ತವವಾಗಿ ಮನಸ್ಸಿನ ತರಬೇತಿ. ಯಾವುದೇ ಶಾಲೆಯು ಶಿಕ್ಷಣ ನೀಡುವ ಗುರಿಯನ್ನು ಹೊಂದಿದ್ದರೆ ಅದು ಮಾರಾಟಕ್ಕಾಗಿ ಸರಕುಗಳನ್ನು ಉತ್ಪಾದಿಸುವ ವಿಚಾರವನ್ನು ಒಮ್ಮೆಲೇ ನಿಲ್ಲಿಸಬೇಕು. ಮಕ್ಕಳಿಗೆ ಸಾಕಷ್ಟು ಪ್ರಮಾಣದಲ್ಲಿ ವಿಧವಿಧದ ಕಚ್ಚಾ ಸಾಮಗ್ರಿಗಳು ಮತ್ತು ಉಪಕರಣಗಳನ್ನು ನೀಡಿ ಅವುಗಳನ್ನು ಬೇಕಾದಂತೆ ಬಳಸಲು, ಪ್ರಯೋಗ ಮಾಡಲು ಬಿಡಿ. ಅವು ಹಾಳಾದರೂ ಪರವಾಗಿಲ್ಲ. ಶ್ರೀ ಪಾರೀಖ್ ಅವರ ಚಿತ್ರಗಳನ್ನು ( ಹರಿಜನ್ 4–9–'37 ಪು 242) ಕೂಲಂಕಶವಾಗಿ ಗಮನಿಸಿದಾಗ ಶಾಲೆಯು ಒಂದು ಕಸುಬಿಗೇನಿರ್ದಿಷ್ಟವಾಗಿದ್ದಾಗಲೂ, ತರಬೇತಿ ಪಡೆದಿರುವ ಬೆಳೆದ ಮಕ್ಕಳು

* ದಯಮಾಡಿ ಹರಿಜನ್ 4–9–37, ಪುಟ 242 ಪರಿಶೀಲಿಸಿ.

ಕೆಲಸ ಮಾಡಿದಾಗಲೂ ಸಹ ಹಾಳಾಗುವ ಸಾಮಗ್ರಿ ಸಾಕಷ್ಟು ಪ್ರಮಾಣದಲ್ಲಿಯೇ ಇರುತ್ತದೆ. ಒಂದು ವಿಜ್ಞಾನದ ಕಾಲೇಜಿನಂತೆಯೇ ವೃತ್ತಿ ತರಬೇತಿ ಶಾಲೆಯೂ ಪ್ರಯೋಗ ಮಾಡಲು ಮತ್ತು ಸಂಪನ್ಮೂಲಗಳನ್ನು ಬೇಕಾದಂತೆ ಬಳಸಲು. ಸೀಮಿತ ಸಂಪನ್ಮೂಲಗಳಿರುವ ಭಾರತದಂತಹ ದೇಶದಲ್ಲಿ ಅಂಥ ಸಂಸ್ಥೆಗಳನ್ನು ಎಷ್ಟು ಬೇಕೋ ಅಷ್ಟೇ ಸಂಖ್ಯೆಯಲ್ಲಿ ಪ್ರಾರಂಭಿಸಬೇಕು ಹಾಗೂ ಅವು ಪ್ರಮುಖ ಕೇಂದ್ರಗಳಲ್ಲಿ ಇರಬೇಕು. ಗೋರಖಪುರ ಮತ್ತು ಅಯೋಧ್ಯೆಯ ಹುಡುಗರನ್ನು ಆಯ್ಕೆ ಮಾಡಿ ಅವರನ್ನು ಚರ್ಮಸಂಸ್ಕರಣದ ತರಬೇತಿಗೆ ಕಾನ್ಪುರಕ್ಕೆ ಕಳಿಸುವುದರಿಂದ ದೇಶಕ್ಕೆ ಯಾವುದೇ ನಷ್ಟವಿಲ್ಲ; ಹಾಗಿಲ್ಲದಿದ್ದರೆ ಅಸಂಖ್ಯಾತ ವೃತ್ತಿ ಶಾಲೆಗಳ ಹಣ ಪೋಲಾಗುತ್ತದೆ. ಅನುಮಾನವೇ ಇಲ್ಲ."

" ಈ ಪೋಲಾಗುವಿಕೆಯ ಒಂದು ಅಂಶವು ಬಹುಮಂದಿಯ ಗಮನಕ್ಕೆ ಬಾರದೇ ಹೋಗಿದೆ. ಒಂದು ಪೌಂಡ್ ಹತ್ತಿಯನ್ನು ಬಳಸಿ ವಯಸ್ಕರು ಸುಧಾರಿತ ಯಂತ್ರೋಪಕರಣಗಳನ್ನು ಬಳಸಿ ನಾಲ್ಕು ಜನರಿಗೆ ಬೇಕಿರುವಷ್ಟು ಬಟ್ಟೆಯನ್ನು ತಯಾರಿಸಬಹುದು; ಅನನುಭವಿಗಳಾದರೆ ಕೇವಲ ಇಬ್ಬರಿಗೆ ಮಾತ್ರ. ಇದರ ಅರ್ಥವೆಂದರೆ ಭಾರತದ ಜನಸಂಖ್ಯೆಗೆ ಅಗತ್ಯವಿರುವಷ್ಟು ಬಟ್ಟೆ ತಯಾರಿಸಲು ನಾವು ದುಪ್ಪಟ್ಟು ಭೂಮಿಯಲ್ಲಿ ಹತ್ತಿ ಬೆಳೆಯಬೇಕಾಗುತ್ತದೆ. ಇದನ್ನೇ ಬೇರೆ ರೀತಿಯಲ್ಲಿ ನೋಡುವುದಾದರೆ, ನಮ್ಮ ದೇಶಕ್ಕೆ ಅಗತ್ಯವಿರುವ ಬಟ್ಟೆಯನ್ನು ಉತ್ಪಾದಿಸಲುಕೌಶಲದ ಕೊರತೆಯುಳ್ಳವರನ್ನು ನೇಮಿಸಿದರೆ ಆಗ ಹತ್ತಿ ಬೆಳೆಯಲು ಬೇಕಿರುವ ಭೂಮಿಯಲ್ಲಿ , ಪರಿಣತರು ಅದೇ ಕೆಲಸ ಮಾಡುವುದಾದರೆ ಹತ್ತಿ ಮತ್ತು ಧಾನ್ಯಗಳನ್ನು ಬೆಳೆದು ಜನರಿಗೆ ಬಟ್ಟೆ ಹಾಗೂ ಆಹಾರ ಎರಡೂ ದೊರಕುವಂತೆ ಮಾಡಬಹುದು."

"ಈ ಪೋಲು ಮಾಡುವಿಕೆಯ ಮೂರನೆಯ ಅಂಶವನ್ನೂ ಗಮನಿಸುವುದು ಅಗತ್ಯ. ಶಾಲಾ ಮಕ್ಕಳು ಫ್ಯಾನ್ಸಿ ಸಾಮಾನುಗಳನ್ನು ತಯಾರಿಸುತ್ತಾರೆಂದು ಹೇಳಲಾಗಿದೆ. ಒಂದು ತಾಂತ್ರಿಕ ಶಾಲೆಯ ಹಳೆಯ ವಿದ್ಯಾರ್ಥಿಯ ಆಟಿಕೆಗಳನ್ನು ನೋಡಿದೆ. ಅವನು ಬಳಸಿದ ಮರ, ಉಪಕರಣಗಳು ಮತ್ತು ಸ್ಕ್ರೂ ಮೊಳೆಗಳು ಹೊರದೇಶದಿಂದ ಬಂದಿದ್ದವು. ಅಂಥ ಉದ್ದಿಮೆಗಳು ಈ ಮೊದಲು ಅಸ್ತಿತ್ವದಲ್ಲಿ ಇಲ್ಲದಿದ್ದ ಮಾರುಕಟ್ಟೆಯೊಂದನ್ನು ವಿದೇಶೀ ಸರಕುಗಳಿಗೆ ಸೃಷ್ಟಿಸುತ್ತದೆ. ನಾವು ನಮ್ಮದೇ ಪ್ಲೈ ವುಡ್ ಅನ್ನು ತಯಾರಿಸಬಹುದೆಂದು ನೀವು ವಾದಿಸಬಹುದು. ಆದರೆ ಪ್ಲೈವುಡ್‌ನ ಸಲುವಾಗಿಯೇ ಮರಗಳನ್ನು ಬೆಳೆಯಲು ಭಾರತದಲ್ಲಿ ಅಮೆರಿಕಾದಂತೆ ಹೆಚ್ಚುವರಿ ಭೂಮಿಯಿಲ್ಲ. ಕಚ್ಚಾ ಸಂಪನ್ಮೂಲಗಳು ಮತ್ತು ಬಂಡವಾಳವನ್ನು ಅನಗತ್ಯ ವಸ್ತುಗಳ ಉತ್ಪಾದನೆಗೆ ತಿರುಗಿಸುವುದನ್ನು ನಾವು ಉತ್ತೇಜಿಸಬಾರದು, ಬದಲಾಗಿ ನಿಲ್ಲಿಸಬೇಕು."

"ಒಂದು ಶಾಲೆ ಅಥವಾ ಕಾಲೇಜು ಯುವ ಮನಸ್ಸುಗಳು ಲೌಕಿಕ ಬೆಲೆ ಇತ್ಯಾದಿ ಸಂಗತಿಗಳ ಬದಲಾಗಿ ನಿಜವಾದ ಮೌಲ್ಯಗಳ ಬಗ್ಗೆ ಕಾಳಜಿ ಇರುವ ವಾತಾವರಣದಲ್ಲಿ ಬೆಳೆಯಬೇಕು. ಸುಲಭವಾಗಿ ಪ್ರಭಾವಿತವಾಗುವ ಕಾಲಖಂಡದಲ್ಲಿ ಅವರ ಮನಸ್ಸುಗಳು ತಯಾರಿಕೆ, ಮಾರುಕಟ್ಟೆ ವಿತರಣೆ ಮತ್ತು ಹಣಗಳಿಕೆ ಇವುಗಳನ್ನೇ ಆದರ್ಶವೆಂದು ಎಣಿಸುವುದಾದರೆ ಅವರ ವಿಕಾಸವು ಕುಂಠಿತವಾಗುತ್ತದೆ ಮತ್ತು ಆ ಪ್ರಕ್ರಿಯೆಗೆ ನಾವು ನೀಡುವ ಪ್ರಾಮುಖ್ಯ ಹೆಚ್ಚಾಗುತ್ತದೆ. ಇದರ ಫಲಿತಾಂಶವು ನಾವಿಂದು ಎಲ್ಲೆಡೆ ನೋಡುತ್ತಿರುವಂತೆ ಸಮೃದ್ಧಿಯ ನಡುವೆಯೂ ಇರುವ ಬಡತನ. ಶ್ರೀ ರಾಮಕೃಷ್ಣ ಪರಮಹಂಸರು ವೃತ್ತಿ ತರಬೇತಿಗೆ ಯಾವುದೇ ಪ್ರಾಧಾನ್ಯವನ್ನು ನೀಡಲಿಲ್ಲ ಎನ್ನುವುದು ಗಮನಾರ್ಹ ಸಂಗತಿ."

"ಅವನು ಈಗ ಏಳು ವರ್ಷಗಳಲ್ಲಿ ಕಲಿಯುತ್ತಿರುವುದನ್ನು ಕೇವಲ ಎರಡು ವರ್ಷಗಳಲ್ಲಿ ಕಲಿಯುವಂತೆ ಕಲಿಕಾ ವೇಗವನ್ನುಹೆಚ್ಚಿಸಲು ಸಾಧ್ಯವಿದೆ ಎನ್ನುವುದು ಕುತೂಹಲಭರಿತ ಭ್ರಮೆಯೆನಿಸುತ್ತದೆ. ಹುಡುಗನ ಮನಸ್ಸು ತುಂಬಿಸಿಕೊಳ್ಳಲು ಕಾಯುತ್ತಿರುವ ಒಂದು ಖಾಲಿ ಕೊಡವಲ್ಲ. ಅವನು 16 ನೇ ವಯಸ್ಸಿನಲ್ಲಿ ಮಾತ್ರ ಕಲಿಯಲು ಸಾಧ್ಯವಿರುವುದನ್ನು 8

ವರ್ಷವಾಗಿದ್ದಾಗಲೇ ಕಲಿಯುವುದು ಸಾಧ್ಯವಿಲ್ಲ; ಹಾಗೆ ಮಾಡಲೂಬಾರದು. ಕಲಿಕೆ ಸಾವಕಾಶವಾಗಿ ಆಗುತ್ತಿರುವುದಕ್ಕೆ ಕಾರಣ ವಿದೇಶೀ ಭಾಷೆಯಲ್ಲ. ನಾವು ನಿಜಕ್ಕೂ ಜನರು ಭಾವಿಸಿದಷ್ಟು ಹೆಚ್ಚು ಸಮಯವನ್ನೂ ನೀಡುತ್ತಿಲ್ಲ. ನಿಬಂಧಗಳನ್ನು ರಚಿಸುವುದು ಮನಸ್ಸಿಗೆ ಮತ್ತು ಭಾವಕೋಶಕ್ಕೆ ಒಂದು ತರಬೇತಿಯಾಗಿದ್ದುಅಂಥ ತರಬೇತಿಯು ಅನಿವಾರ್ಯವಾಗಿ ನಿಧಾನಗತಿಯದೇ ಆಗಿರುತ್ತದೆ. ಇಂಗ್ಲೆಂಡ್ ದೇಶದ ಶೈಕ್ಷಣಿಕ ವಾರ್ಷಿಕ ಯೋಜನಾ ಕೈಪಿಡಿಯು ಕೊಟ್ಟಿರುವ ಪಠ್ಯಕ್ರಮದಲ್ಲಿನ ವಿಷಯವಾರು ಸಮಯದ ಹಂಚಿಕೆಯ ಪಟ್ಟಿ ಇಲ್ಲಿದೆ :

| ವಿಷಯ | ಗಂಟೆಗಳು |
|---|---|
| ಸಾಮಾನ್ಯ ಸಭೆ, ನೋಂದಣಿ ಮತ್ತು ಧಾರ್ಮಿಕ ಬೋಧನೆ | 2 1/2 |
| ಇಂಗ್ಲೀಷ್ ( ಓದುವುದು, ಬರೆಯುವುದು, ವ್ಯಾಕರಣ ಮತ್ತು ಲೇಖನ ಕಲೆ) | 10 |
| ಅಂಕಗಣಿತ ಮತ್ತು ಸರಳ ಗಣಿತ | 5 ½ |
| ಇತಿಹಾಸ ಮತ್ತು ಭೂಗೋಳ | 3 |
| ವಿಜ್ಞಾನ ಮತ್ತು ಮಾನವಿಕ ವಿಷಯ ( ಪ್ರಯೋಗ ಸೇರಿ) | 3 |
| ದೈಹಿಕ ಕಸರತ್ತು ಮತ್ತು ಆಟಗಳು | 3 ½ |
| ಒಟ್ಟು | 27 ½ |

" ಬೋಧನೆಗಾಗಿ ಮೀಸಲಿಟ್ಟಿರುವ ಒಟ್ಟು ಅವಧಿಯಲ್ಲಿ ಇಂಗ್ಲೀಷಿಗೆ ಅರ್ಧದಷ್ಟು ಸಮಯ ದೊರೆಯುತ್ತದೆ. ಪ್ರತಿಯೊಂದು ಪಾಠವೂ ಸಹ ಒಂದು ಇಂಗ್ಲೀಷ್ ಪಾಠವೆಂದು ಒತ್ತಿ ಹೇಳಬೇಕಾಗಿದೆ.ಭಾಷೆ ಸಂಕೀರ್ಣವಾದಷ್ಟೂ, ಅದರ ಮೇಲೆ ಪ್ರಭುತ್ವ ಸಾಧಿಸಿದಷ್ಟೂ ನಮ್ಮ ಬುದ್ಧಿಮತ್ತೆ ವಿಕಾಸಗೊಳ್ಳುತ್ತಾ ಇನ್ನಷ್ಟು ಸ್ಪಷ್ಟವೂ ನಿಖರವೂ ಆಗುತ್ತದೆ. ಮನಸ್ಸನ್ನು ಬೆಳೆಯಿಸಲು ಬಳಸುವ ವಿಧಾನವು ಅನುಪಯುಕ್ತ, ನಿಧಾನಗತಿಯದು ಮತ್ತು ವ್ಯರ್ಥವೆಂದು ಭಾಸವಾಗಬಹುದು; ಆದರೆ ಶಿಕ್ಷಣದ ಉದ್ದೇಶ ಮನಸ್ಸನ್ನು ಗಟ್ಟಿಗೊಳಿಸುವುದು ಹಾಗೂ ಸಾಮಾಜಿಕ ಬದುಕಿನಲ್ಲಿ ಅಗತ್ಯ ಮಾನಸಿಕ ಹೊಂದಾಣಿಕೆಗಳನ್ನು ಮಾಡಿಕೊಳ್ಳುವುದನ್ನು ಸಾಧ್ಯವಾಗಿಸುವುದು ಎನ್ನುವುದನ್ನು ನೆನಪಿಡಬೇಕು.ಶಾಲೆಗಳು ಕೇವಲ ಮಾನವರನ್ನು ರೂಪಿಸಿದರೆ ಸಾಲದು; ಅವು ಸರಕುಗಳನ್ನೂ ತಯಾರಿಸಬೇಕು ಎಂದು ನಾವು ಒತ್ತಾಯ ಮಾಡುವುದು ಬೇಡ."

" ಸಾರಾಂಶರೂಪದಲ್ಲಿ ಹೇಳುವುದಾದರೆ, ಶಾಲೆಗಳನ್ನು ಕರಗಿಸಿ, ದೇಶವನ್ನು ದಿವಾಳಿಯೆಬ್ಬಿಸುವ ದೂರದೃಷ್ಟಿಯ ಕೊರತೆಯುಳ್ಳ ನೀತಿಯನ್ನು ಅಳವಡಿಸಿಕೊಳ್ಳುವುದು ಮೂರ್ಖತನದ ಆರ್ಥಿಕತೆ."

"ಒಬ್ಬ ಪ್ರಾಧ್ಯಾಪಕರು"

ಇದು ಹೆಸರಾಂತ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಿಂದ ಬಂದಿದೆ. ಈ ಲೇಖನದ ಜೊತೆ ಒಂದು ಸಹಿ ಹಾಕಿರುವ ಪತ್ರವಿದೆ. ಆದರೆ ಲೇಖನದಲ್ಲಿ ಅವರ ಹೆಸರು ಕಾಣಿಸಿಲ್ಲವಾದ್ದರಿಂದ ನಾನಿಲ್ಲಿ ಲೇಖಕರ ಹೆಸರು ಹಾಕಿಲ್ಲ. ಏನೇ ಆಗಲಿ, ಓದುಗರಕಾಳಜಿ ಇರುವುದು ಅದರಲ್ಲಿರುವ ವಿಷಯಗಳ ಬಗ್ಗೆಹೊರತು ಲೇಖಕರ ಕುರಿತಾಗಿ ಅಲ್ಲವೆಂದು ಭಾವಿಸುತ್ತೇನೆ. ಪೂರ್ವಗ್ರಹಪೀಡಿತ ಅಭಿಮತಗಳು ಯಾರೊಬ್ಬರ ಕಾಣ್ಕೆಯನ್ನೇ ಮಸುಕಾಗಿಸುತ್ತವೆ ಎನ್ನುವುದಕ್ಕೆ ಇದು ಗಮನಾರ್ಹ ನಿದರ್ಶನ. ಇದರ ಲೇಖಕರು ನನ್ನ ಯೋಜನೆಯನ್ನು ಅರ್ಥ ಮಾಡಿಕೊಳ್ಳಲು ಯಾವ ಪ್ರಯತ್ನವನ್ನೂ ಮಾಡಿಲ್ಲ. ನನ್ನ ಕನಸಿನ ಶಾಲೆಯ ಹುಡುಗರನ್ನು ಸಿಲೋನಿನ ಪ್ಲಾಂಟೇಷನ್ ನಲ್ಲಿ ಕೆಲಸ ಮಾಡುವ ಅರೆ–ಗುಲಾಮರಂಥ ಹುಡುಗರಿಗೆ ಹೋಲಿಸಿ ಈ ಲೇಖಕರು ತಮ್ಮನ್ನು ತಾವೇ ಹೀಗಳೆದುಕೊಂಡಿದ್ದಾರೆ. ಪ್ಲಾಂಟೇಷನ್‌ನಲ್ಲಿ ಕೆಲಸಮಾಡುವ ಹುಡುಗರನ್ನು ವಿದ್ಯಾರ್ಥಿಗಳನ್ನಾಗಿ ಯಾರೂ ಪರಿಗಣಿಸುವುದಿಲ್ಲವೆಂದು ಅವರು ಮರೆಯುತ್ತಾರೆ. ಅವರು ಮಾಡುವ ಕೂಲಿಕೆಲಸವು ಅವರ ವಿದ್ಯಾಭ್ಯಾಸದ ಒಂದು ಭಾಗವಲ್ಲ.ನಾನು ಪ್ರಸ್ತಾಪಿಸಿರುವ ಶಾಲೆಯಲ್ಲಿ, ಬೇರೆಡೆ ಹುಡುಗರು ಪ್ರೌಢಶಾಲೆಯಲ್ಲಿ ಏನನ್ನು ಕಲಿಯುತ್ತಾರೋ ಅವೆಲ್ಲವನ್ನೂ ಕಲಿಯುತ್ತಾರೆ. ಇಂಗ್ಲೀಷ್ ಇರುವುದಿಲ್ಲ; ಬದಲಾಗಿ ದೈಹಿಕ ಶಿಕ್ಷಣ, ಸಂಗೀತ, ಚಿತ್ರಕಲೆ ಇದ್ದು ವೃತ್ತಿ ತರಬೇತಿಯಂತೂ ಇದ್ದೇ ಇರುತ್ತವೆ. ಈ ಶಾಲೆಗಳನ್ನು ಕಾರ್ಖಾನೆಗಳು ಎಂದು ಅವರು ಕರೆಯುವುದು ಈ ಲೇಖಕರು ಅನೇಕ ವಾಸ್ತವತೆಗಳನ್ನು ಒಪ್ಪಿಕೊಳ್ಳಲು ನಿರಾಕರಿಸುತ್ತಿರುವುದು ಕಾಣುತ್ತದೆ. ಇದು ಹೇಗಿದೆಯೆಂದರೆ ಒಬ್ಬ ಮಾನವನ ಕುರಿತಾದ ವಿವರಣೆಯನ್ನು ಓದದೆಯೇ ಅವನನ್ನು ಕೋತಿಯೆಂದು ಕರೆದಂತೆ. ಏಕೆಂದರೆ ಆತ ಕೋತಿಯನ್ನು ಬಿಟ್ಟು ಬೇರೆ ಯಾವ ಪ್ರಾಣಿಯನ್ನೂ ನೋಡಿಲ್ಲ ಹಾಗೂ ಕೆಲವು ವಿವರಗಳು – ಕೆಲವೇ ವಿವರಗಳು – ಕೋತಿಗೆ ಹೊಂದಿಕೊಳ್ಳುತ್ತವೆ. ನಾನು ನನ್ನ ಪ್ರಸ್ತಾವನೆಯಲ್ಲಿ ಹೇಳಿರುವ ಎಲ್ಲ ನಿರೀಕ್ಷೆಗಳನ್ನೂ ಇಟ್ಟುಕೊಳ್ಳಬಾರದು ಎಂದು ಅ ಪ್ರಾಧ್ಯಾಪಕರು ಸಾರ್ವಜನಿಕರನ್ನು ಎಚ್ಚರಿಸಿದ್ದರೆ ಅವರು ಹೇಳಿದ್ದು ಸರಿಯಿರುತ್ತಿತ್ತು. ಅದರೆ ಅದು ಕೂಡ ಅನಗತ್ಯವಾಗಿತ್ತು. ಏಕೆಂದರೆ ಸ್ವತಃ ನಾನೇ ಅದನ್ನು ಹೇಳಿದ್ದೆ.

ನನ್ನ ಪ್ರಸ್ತಾಪವು ವಿನೂತನವಾದದ್ದೆಂದು ನಾನು ಒಪ್ಪಿಕೊಳ್ಳುತ್ತೇನೆ. ಆದರೆ **ನವೀನ**ತೆಯು ಹೇಗೆ ನ್ಯೂನತೆಯಾದೀತು? ಇದರ ಹಿಂದೆ ಗಮನಾರ್ಹ ಅನುಭವಗಳಿಲ್ಲವೆನ್ನುವುದನ್ನು ನಾನು ಒಪ್ಪುತ್ತೇನೆ. ಆದರೆ ನಾನು ಮತ್ತು ನನ್ನ ಸಹಯೋಗಿಗಳು **ಈ**ಗಾಗಲೇ ಹೊಂದಿರುವ ಅನುಭವವು ನಾವು ಪ್ರಾಮಾಣಿಕವಾಗಿ ಪ್ರಯತ್ನಿಸಿದರೆ ನಾವು ಯಶಸ್ಸು ಗಳಿಸುತ್ತೇವೆ ಎಂದು ಉತ್ತೇಜನ ನೀಡಿದೆ. ಒಂದು ವೇಳೆ ಈ ಪ್ರಯೋಗವು ಅಯಶಸ್ವಿಯಾದರೂ ಸಹ ರಾಷ್ಟ್ರವು ಅದರಿಂದ ಏನೂ ಕಳೆದುಕೊಳ್ಳುವುದು ಇಲ್ಲ. ಅದರೆ ಅದು ಆಂಶಿಕವಾಗಿ ಯಶಸ್ವಿಯಾದರೂ ಅದರಿಂದ ಆಗುವ ಪ್ರಯೋಜನಗಳು ಅಪಾರ. ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿ, ಕಡ್ಡಾಯವಾಗಿ ಮತ್ತು ಪರಿಣಾಮಕಾರಿಯಾಗಿ ಮಾಡಲು ಬೇರೆ ಯಾವುದೇ ಮಾರ್ಗವಿಲ್ಲ. ಪ್ರಸಕ್ತ ಪ್ರಾಥಮಿಕ ಶಿಕ್ಷಣವು ಒಂದು ಉರುಳು ಮತ್ತು ಒಂದು ಭ್ರಮೆಯಾಗಿದೆ.

ಶ್ರೀ ನರಹರಿ ಪಾರೀಖ್ ಅವರ ದತ್ತಾಂಶವು ಈ ಯೋಜನೆಗೆ ಸಾಧ್ಯವಾದಷ್ಟು ಸಹಾಯಕವಾಗಲೆಂದು ರಚಿತವಾಗಿದೆ.ಅವು ನಿರ್ಣಾಯಕವಲ್ಲ. ಅವು ಪ್ರೋತ್ಸಾಹದಾಯಕವಾಗಿದ್ದು ಉತ್ಸಾಹಿಗಳಿಗೆ ಉತ್ತಮ ಮಾಹಿತಿ ದೊರಕಿಸುತ್ತದೆ. ಏಳು ವರ್ಷಗಳ ಕಾಲಮಿತಿ ನನ್ನ ಯೋಜನೆಯಲ್ಲಿ ಕಡ್ಡಾಯವಲ್ಲ. ನಾನು ಪರಿಭಾವಿಸಿರುವ ಬೌದ್ಧಿಕ ಮಟ್ಟವನ್ನು ಮಕ್ಕಳು ಮುಟ್ಟಲು ಇನ್ನೂ ಹೆಚ್ಚು ಸಮಯ ಬೇಕಾಗಬಹುದು. ಬೋಧನೆಗೆ ಈಗ ಮೀಸಲಿಟ್ಟಿರುವ ಅವಧಿಯನ್ನು ಮತ್ತಷ್ಟು ಹೆಚ್ಚಿಸುವುದರಿಂದ ದೇಶಕ್ಕೆ ಯಾವ ನಷ್ಟವೂ ಇಲ್ಲ. ನನ್ನ ಯೋಜನೆಯ ಅನಿವಾರ್ಯ ಅಂಶಗಳು ಇವು:

1 ಒಟ್ಟಂದದಲ್ಲಿ ಒಂದು ಅಥವಾ ಹೆಚ್ಚು ವೃತ್ತಿಗಳು ಹುಡುಗನ ಅಥವಾ ಹುಡುಗಿಯ ಸರ್ವಾಂಗೀಣ ಬೆಳವಣಿಗೆಗೆ ಸೂಕ್ತ ಮಾಧ್ಯಮವಾಗಿದೆ. ಆದ್ದರಿಂದ ಸಂಪೂರ್ಣ ಪಠ್ಯಕ್ರಮವು ವೃತ್ತಿ ತರಬೇತಿಯ ಸುತ್ತ ನಡೆಯಬೇಕು.

2 ಹೀಗೆ ಪರಿಭಾವಿಸಲ್ಪಟ್ಟ ಪ್ರಾಥಮಿಕ ಶಿಕ್ಷಣವು ಸ್ವಯಂಪೋಷಿತವಾಗಿರಲೇಬೇಕಾಗುತ್ತದೆ. ಮೊದಲ ಒಂದು ಅಥವಾ ಅಗತ್ಯ ಬಿದ್ದರೆ ಎರಡು ವರ್ಷ, ಸಂಪೂರ್ಣವಾಗಿ ಹಾಗಿಲ್ಲದೆ ಇರಬಹುದು. ಪ್ರಾಥಮಿಕ ಶಿಕ್ಷಣವೆಂದರೆ ಮೇಲೆ ಹೇಳಿರುವ ಸ್ವರೂಪದ್ದು.

ಅಂಕಗಣಿತ ಮತ್ತು ಇತರ ತರಬೇತಿಗಳನ್ನು ವೃತ್ತಿ ಶಿಕ್ಷಣದ ಮುಖಾಂತರ ನೀಡುವ ಸಾಧ್ಯತೆಯನ್ನು ಈ ಪ್ರಾಧ್ಯಾಪಕರು ಪ್ರಶ್ನಿಸುತ್ತಿದ್ದಾರೆ.ಅವರು ಅನುಭವವಿಲ್ಲದೇ ಮಾತನಾಡುತ್ತಿದ್ದಾರೆ. ನಾನು ನನ್ನ ಅನುಭವದಿಂದ ಹೇಳುತ್ತಿದ್ದೇನೆ. ನಾನು ಟಾಲ್ ಸ್ಟಾಯ್ ಫಾರ್ಮ್ ( ಟ್ರಾನ್ಸ್ ವಾಲ್ ) ನಲ್ಲಿದ್ದಾಗ ಅಲ್ಲಿ ನನ್ನ ಸುಪರ್ದಿಯಲ್ಲಿದ್ದ ಹುಡುಗರು ಮತ್ತು ಹುಡುಗಿಯರಿಗೆ ಸರ್ವಾಂಗೀಣ ಬೆಳವಣಿಗೆಯನ್ನು ನೀಡಲು ಯಾವುದೇ ಸಮಸ್ಯೆಯಿರಲಿಲ್ಲ. ಅಲ್ಲಿ ಬಹುಮುಖ್ಯವಾಗಿ ಇದ್ದದ್ದು ಸುಮಾರು ಎಂಟು ಗಂಟೆಗಳ ಕಾಲದ ವೃತ್ತಿ ತರಬೇತಿ. ಅವರಿಗೆ ಒಂದು ಅಥವಾ ಹೆಚ್ಚೆಂದರೆ ಎರಡು ಗಂಟೆಗಳ ಅವಧಿಯ ಪುಸ್ತಕ ಕಲಿಕೆ ಇರುತ್ತಿತ್ತು. ವೃತ್ತಿಗಳೆಂದರೆ ನೆಲ ಅಗೆಯುವುದು, ಅಡುಗೆ, ಜಾಡಮಾಲಿ, ಚಪ್ಪಲಿ ತಯಾರಿಕೆ, ಸರಳ ಮರಗೆಲಸ ಮತ್ತು ಸಂದೇಶವಾಹಕ. ಮಕ್ಕಳ ವಯಸ್ಸು ಆರರಿಂದ ಹದಿನಾರು. ಆ ಪ್ರಯೋಗವು ನಂತರದ ದಿನಗಳಲ್ಲಿ ಇನ್ನಷ್ಟು ಸಮೃದ್ಧಗೊಂಡಿದೆ.
ಹರಿಜನ್, 18–9–'37

## 18

## ಕಾರ್ಯಪ್ರವೃತ್ತರಾಗುವುದು – ಕೇವಲಆಲಸಿ ಚಿಂತನೆ ಮಾಡುವುದಲ್ಲ

ಡಾ. ಜಿ. ಎಸ್. ಅರುಂಡೇಲ್ ಅವರು ತಾವು 'ಓರಿಯಂಟ್ ಇಲ್ಲಸ್ಟ್ರೇಟೆಡ್ ವೀಕ್ಲಿ' ಪತ್ರಿಕೆಗೆ ಬರೆದಿರುವ ಲೇಖನವೊಂದರ ಪ್ರಕಟಣಾಪೂರ್ವ ಪ್ರತಿಯೊಂದನ್ನು ನನಗೆ ಕಳಿಸಿ ಕೆಳಗಿರುವ ಪತ್ರವನ್ನೂ ಬರೆದಿದ್ದಾರೆ:

"ಈ ದೇಶದಲ್ಲಿ ಇಷ್ಟು ವರ್ಷಗಳ ಕಾಲ ಇದ್ದ ಕೃತಕತೆಯಿಂದ ಹೊರಬಂದು ಈಗ ಶಿಕ್ಷಣವು ನಿಜವಾಗಿಯೂ ಘಟಿಸಬೇಕು ಎಂದು ನೀವು ಹೇಳುತ್ತಲಿರುವಿರಿ. ನಾನು ಮುವ್ವತ್ತು ವರ್ಷಗಳಿಂದಲೂ ಭಾರತದ ಶಿಕ್ಷಣ ಕ್ಷೇತ್ರದಲ್ಲಿ ಸಕ್ರಿಯನಾಗಿದ್ದೇನೆ ಮತ್ತು 'ಓರಿಯಂಟ್ ಇಲ್ಲಸ್ಟ್ರೇಟೆಡ್ ವೀಕ್ಲಿ' ಪತ್ರಿಕೆಯಲ್ಲಿ ಪ್ರಕಟವಾಗಲಿರುವ ಲೇಖನವೊಂದನ್ನು ಕಳಿಸುತ್ತಿದ್ದೇನೆ. ಇದರಲ್ಲಿ ಕೆಲಮಟ್ಟಿಗೆ ನಿಮ್ಮ ನಿಲುಮೆಗಳೂ ಇರಬಹುದು. ರಾಷ್ಟ್ರೀಯ ಶಿಕ್ಷಣ ಯೋಜನೆಯೊಂದು ಚಾಲನೆಯಲ್ಲಿರಬೇಕು ಮತ್ತು ಪ್ರತಿಯೊಬ್ಬ ರಾಷ್ಟ್ರೀಯ ಸಚಿವರು ತಮ್ಮ ತಮ್ಮ ಪ್ರಾಂತ್ಯಗಳಲ್ಲಿ ಅದನ್ನು ಅನುಷ್ಠಾನಗೊಳಿಸಲು ಯತ್ನಿಸಬೇಕೆಂದು ನಾನು ಭಾವಿಸುತ್ತೇನೆ. ಸ್ವತಂತ್ರವಾಗಿ ಅದನ್ನು ದುರಸ್ತಿಗೊಳಿಸುವ ಕಾರ್ಯವೇನೋ ಸಾಕಷ್ಟು ಪ್ರಮಾಣದಲ್ಲಿ ನಡೆದಿದೆ. ಈ ಮಹತ್ವದ ತತ್ವಗಳ ಕುರಿತಾದ ಚಿಂತನೆಗಳಿಗೆ ಚಾಲನೆ ನೀಡಿ ಸಾರ್ವಜನಿಕರು ಹಾಗೂ ಸರಕಾರ ಒಂದು ಸಾಮಾನ್ಯ ಬಂಧ ಮತ್ತು ಸಾಮಾನ್ಯ ಪ್ರಯತ್ನಗಳ ಮೂಲಕ ಕಾರ್ಯಪ್ರವೃತ್ತರಾಗಬೇಕಿದೆ."

ಆ ಲೇಖನದಿಂದ ನಾನು ಅತ್ಯಂತ ಮುಖ್ಯವಾದ ಮತ್ತು ಪ್ರಸ್ತುತ ಸಾರಭಾಗವನ್ನು ತೆಗೆದುಕೊಂಡಿದ್ದೇನೆ. ಹೇಗೆ ಮುಂದುವರಿಯಬೇಕು ಎನ್ನುವ ಪ್ರಶ್ನೆಯ ನಂತರ ಅವರು ಹೀಗೆ ಹೇಳುತ್ತಾರೆ. :

"ರಾಷ್ಟ್ರೀಯ ಶಿಕ್ಷಣದ ಹಿಂದಿರುವ ಮೂಲತತ್ವಗಳು ಏನಿರಬೇಕೆಂದು ಸೂಚಿಸಲು ಇಲ್ಲಿ ಸ್ಥಳಾವಕಾಶವಿಲ್ಲ. ಆದರೆ ಶಾಲಾ ವರ್ತುಲದ ಪರಿಧಿಯಲ್ಲಿನ ಹುಡುಗರು ಮತ್ತು ಹುಡುಗಿಯರ ಕುರಿತಾಗಿ ಹೇಳುವುದಾದರೆ, ನಾವು 'ಶಾಲೆ' ಮತ್ತು 'ಕಾಲೇಜು' ಇವುಗಳ ನಡುವಿನ ಅಸಂಬದ್ಧ ಭೇದವನ್ನು ಹಂತಹಂತವಾಗಿ ತೊಡೆದುಹಾಕಬೇಕು. ಹಾಗೆ 'ಮಾಡುವುದು' ನಮಗೆ ಮುಖ್ಯವಾಗಬೇಕು.

" ಚಿಂತನೆಗಳು ಎಷ್ಟೇ ಉದ್ದೀಪನಗೊಳಿಸಲಿ, ಪ್ರಚೋದನೆಯನ್ನು ನೀಡಲಿ ಕ್ರಿಯೆಗೆ ತಿರುಗದೇ ಹೋದರೆ ಅವು ವ್ಯರ್ಥವೆಂದೇ ನನ್ನ ಭಾವನೆ. ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ತೀರಾಅಪಾಯಕಾರಿ ಎನ್ನುವಷ್ಟು ನಿರ್ಲಕ್ಷ್ಯಕ್ಕೆ ಒಳಪಟ್ಟಿರುವ ಭಾವ ಮತ್ತು ಸಂವೇದನೆಗಳ ಬಗ್ಗೆಯೂ ಇದೇ ಮಾತನ್ನು ಹೇಳಬಹುದು. ಯುವಜನತೆಯು ಕುಶಲಕರ್ಮಿಗಳಾಗುವುದು ಭಾರತದ ಇಂದಿನ ಅಗತ್ಯ. ಶಿಕ್ಷಣದಿಂದ ರೂಪಿತವಾದ ಅವರ ಚಾರಿತ್ರ್ಯದ ಸ್ವರೂಪದಿಂದಾಗಿಯೇ ಅದು ಸಹಜವಾಗಿ ಕಾಯಕವಾಗಿ, ಉಪಯುಕ್ತ ಸಾಮರ್ಥ್ಯವಾಗಿ, ಸೇವೆಯಾಗಿ ಪರಿವರ್ತನೆ ಹೊಂದುತ್ತದೆ. ಪರಿಸರದ ಅಥವಾ ಅನುವಂಶೀಯತೆಯ ಕಾರಣಕ್ಕಾಗಿ ತಮಗೆ ದೊರಕಿದ ಯಾವುದೇ ಜೀವನ ಪಥದಲ್ಲಿಯೂ ಸಹ ಅತ್ಯುತ್ತಮ ಕೆಲಸ ಮಾಡಬಲ್ಲ ಯುವಕರು ನಮಗಿಂದು ಬೇಕಾಗಿದ್ದಾರೆ. ಪ್ರತಿ ಶಾಲಾ ವಿಷಯವೂ ಬದುಕಿನ ಉದ್ದೇಶ, ನಿಯಮ ಮತ್ತು ವ್ಯವಸ್ಥೆಯನ್ನು ಅನಾವರಣಗೊಳಿಸುತ್ತದೆ. ನಿಜಾಂಶ, ವಾಸ್ತವತೆಗಳೆಂಬ ಸುಳಿಯಲ್ಲಿ ಸಿಲುಕಿಕೊಂಡು ಶಿಕ್ಷಕರು ಈ ಮುಖ್ಯ ಸಂಗತಿಯನ್ನು ಮರೆಯಬಾರದು. ನಮ್ಮ ಬುದ್ಧಿಮತ್ತೆಯೆಂಬ ಜಗತ್ತಿನಲ್ಲಿ ವಾಸ್ತವಾಂಶಗಳೆನ್ನುವುದು ಇಲ್ಲ; ಇರುವುದು ಕೇವಲ ರೂಢಿ ಮತ್ತು ಸಂಪ್ರದಾಯಗಳು ಮಾತ್ರ. ವಿಜ್ಞಾನವು ನಿಶ್ಚಿತತೆಯಿಂದ ಅನುಮಾನದೆಡೆಗೆ ಒಂದು ಅಮೋಘ ಲಂಘನವನ್ನು ಸಾಧ್ಯವಾಗಿಸಿದೆ ಎಂದು ಸರ್ ಆರ್ಥರ್ ಎಡ್ಡಿಂಗಟನ್ ಅವರು ಉದ್ಗರಿಸಿದ್ದು ನಿಜಕ್ಕೂ ಅರ್ಥಪೂರ್ಣವಾಗಿದೆ. ಹಾಗಾಗಿ, ನಮ್ಮ ಶಿಕ್ಷಣವು ಎಲ್ಲ 'ವಾಸ್ತವಾಂಶ'ಗಳು ವಿದ್ಯಾರ್ಥಿಗಳ ಮನಸ್ಸನ್ನು ಹಗುರವಾಗಿ ಆಕ್ರಮಿಸಬೇಕು ಮತ್ತು ಅವುಗಳನ್ನು ಎಲ್ಲಕ್ಕಿಂತ ಹೆಚ್ಚಾಗಿ, ವ್ಯಕ್ತಿಯ ಮತ್ತು ರಾಷ್ಟ್ರಕ್ಕೆ ಭದ್ರ ಬುನಾದಿಯಾಗಿರುವಚಾರಿತ್ರ್ಯದ ಬೆಳವಣಿಗೆಗಾಗಿ ಬಳಸಿಕೊಳ್ಳಬೇಕು."

"ಒಮ್ಮೆ ಚಾರಿತ್ರ್ಯವು ಅರಳಿದರೆ, ಕೆಲಸ ಮಾಡಬೇಕೆಂಬ ಹಂಬಲ ತೀವ್ರವಾಗುತ್ತದೆ. ಅದು ಸ್ವ ಪೋಷಣೆ ಮತ್ತು ತ್ಯಾಗ ಎರಡೂ ಇರಬಹುದು. ಭೂತಾಯಿಗೆ ಸಾಧ್ಯವಾದಷ್ಟೂ ಹತ್ತಿರ ಇರಬೇಕೆನ್ನುವ, ಕೃಷಿಗೆ ಸಂಬಂಧಿಸಿದ ಆಚರಣೆಗಳ ಮೂಲಕ ಅವಳನ್ನು ಪೂಜಿಸುವ ಆಸೆ ಹೆಚ್ಚಾಗುತ್ತದೆ. ಜೊತೆಗೆ ನಮ್ಮ ಅಗತ್ಯಗಳನ್ನು ಸರಳಗೊಳಿಸುವುದು ಮತ್ತು ಆಕಾಂಕ್ಷೆಗಳ ಪರಿಶುದ್ಧತೆ ಇವುಗಳ ಮೂಲಕ ಭೂಮಾತೆಗೆ ನಮ್ಮಿಂದ ಅತೀ ಕಡಿಮೆ ಹೊರೆಯಾಗಲೆನ್ನುವ ಮನೋಭಾವ ಬೆಳೆಯುತ್ತದೆ. ಬದುಕಲು ಬೇಕಿರುವಷ್ಟನ್ನು ಭೂಮಿತಾಯಿಯಿಂದ ನೇರವಾಗಿ ಪಡೆಯಲು ಸಾಧ್ಯವಾಗದವರು ಬಹುಶಃ ಯಾರೂ ಇರಲಿಕ್ಕಿಲ್ಲ ಎನ್ನುವುದು ನನ್ನ ದೃಢವಿಶ್ವಾಸ.ಪಟ್ಟಣ ಮತ್ತು ನಗರಗಳಲ್ಲಿಯೂ ಸಹ, ಶಿಕ್ಷಣದ ಎಲ್ಲ ಹಂತಗಳಲ್ಲಿಯೂ ಶಿಕ್ಷಣದ ಒಂದು ಭಾಗವಾಗಿ ಅವಳೊಡನೆ ಕೆಲಮಟ್ಟಿಗಾದರೂ ನೇರ ಸಂಪರ್ಕ ಹೊಂದಿರುವಂತೆ ಮಾಡುತ್ತೇನೆ."

"ಇಂದಿನ ಶಿಕ್ಷಣವನ್ನು ಒಟ್ಟಾರೆ ನಿಷ್ಪ್ರಯೋಜಕವನ್ನಾಗಿ ಮಾಡಿರುವ ಎಲ್ಲ ಶೈಕ್ಷಣಿಕ ಕಂದಾಚಾರಗಳನ್ನು ಕಿತ್ತೊಗೆಯಬೇಕು. ಪ್ರಸಕ್ತ ಅನುಕೂಲಕರ ರಾಷ್ಟ್ರೀಯ ಸಚಿವಸಂಪುಟಗಳ ಕೆಳಗೆ ಕೇವಲ ಬೋಧನೆಗೆ ಸೀಮಿತಗೊಳ್ಳದ ನೈಜ ಶಿಕ್ಷಣ ಪದ್ಧತಿಯಿಂದ ಪ್ರಾರಂಭಿಸಬೇಕು.ಓಬೀರಾಯನ ಕಾಲದ ಶೈಕ್ಷಣಿಕ ಅಭ್ಯಾಸಗಳ ಸೆರೆಮನೆಯಲ್ಲಿ ನಾವಿಂದು ಬಂದಿಯಾಗಿದ್ದೇವೆ. ಗಾಂಧೀಜಿಯವರು ಪ್ರತಿಪಾದಿಸುತ್ತಿರುವ ಸ್ವಯಂ ಪೋಷಿತ ಶಿಕ್ಷಣದ ಸ್ಥೂಲ ಮಾದರಿಯನ್ನು ನಾನು ಹೃದಯಪೂರ್ವಕವಾಗಿ ಸ್ವಾಗತಿಸುತ್ತೇನೆ. ಅವರು ಸೂಚಿಸಿರುವಷ್ಟು ಪ್ರಗತಿ ಸಾಧಿಸುತ್ತೇವೋ ಇಲ್ಲವೋ ತಿಳಿಯದು. ಏಳು

ವರ್ಷಗಳ ಕೋರ್ಸಿನ ನಂತರ ಒಬ್ಬ ಯುವ ನಾಗರಿಕನನ್ನು ' ದುಡಿದು ಸಂಪಾದಿಸುವ ವ್ಯಕ್ತಿಯಾಗಿ ಶಾಲೆಯಿಂದ ಹೊರಗೆ ಬೀಳ್ಕೊಡಬೇಕು' ಎನ್ನುವುದನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಪ್ರತಿಯೊಬ್ಬರೂ – ಭಾಗಶಃ ಶಿಕ್ಷಣದ ಕಾರಣದಿಂದಾಗಿ – ತನ್ನ ಸೃಜನಾತ್ಮಕ ಸಾಮರ್ಥ್ಯದ ಅರಿವನ್ನು ಹೊಂದಿರಬೇಕು ಎನ್ನುವುದು ನನ್ನ ಅಭಿಪ್ರಾಯ; ಏಕೆಂದರೆ ಅವನು ದೇವರಾಗಿ ರೂಪುಗೊಳ್ಳುತ್ತಿರುವ ವ್ಯಕ್ತಿ ಮತ್ತು ಆ ಕಾರಣದಿಂದಲೇ ದೇವರ ಅತ್ಯುನ್ನತ  ಗುಣವಾದ ಸೃಷ್ಟಿಯ ಸಾಮರ್ಥ್ಯ, ಮಾಡುವ ಗುಣ ಹೊಂದಿರುತ್ತಾನೆ. ಈ ಶಕ್ತಿಯನ್ನು ನಾವು ಉದ್ದೀಪನಗೊಳಿಸದಿದ್ದರೆ ಅದೆಂಥ ಶಿಕ್ಷಣ? ಆಗ ಅದು ಕೇವಲ ಸೂಚನೆಗಳನ್ನು ನೀಡುವುದಾಗುತ್ತದೆ ; ಶಿಕ್ಷಣವಲ್ಲ."

" ತಲೆಯಲ್ಲಿ ಇರುವಷ್ಟೇ ಮೆದುಳು ಕೈಗಳಲ್ಲಿಯೂ ಇದೆ. ಯುಗಗಳಿಂದಲೂ ಬೌದ್ಧಿಕತೆಯೇ ನಮ್ಮ ದೇವರಾಗಿದೆ. ಬೌದ್ಧಿತೆಯು ನಮ್ಮ ಸರ್ವಾಧಿಕಾರಿಯಾಗಿಯೂ ಹೌದು; ನಮ್ಮ ಶೋಷಕನೂ ಹೌದು. ನಮ್ಮ ಮುಂದಿನ ಕಾರ್ಯಯೋಜನೆಯಲ್ಲಿ ಅದು ನಮ್ಮ ಸೇವಕನಾಗಿರಬೇಕು ಹಾಗೂ ಪ್ರಕೃತಿಯ ಸುಮಧುರ ಸರಳತೆಗೆ ನಮ್ಮನ್ನು ಸೆಳೆಯುವ ಸರಳ ಬದುಕಿಗೆ ಪೂರಕವಾಗುವ ಪ್ರತಿಯೊಂದನ್ನೂ ನಾವು ಔನ್ನತ್ಯಕ್ಕೇರಿಸಬೇಕು, ಅಲ್ಲದೆ ನನ್ನ ಕೈಗಳನ್ನು ಬಳಸಿ ಬದುಕಲು ಸಹಾಯಕವಾಗಬಲ್ಲ – ಕಲಾವಿದರ, ಕುಶಲಕರ್ಮಿಗಳ, ಕೃಷಿಕರ ಎಲ್ಲ ಬಗೆಯ ದೈಹಿಕ ಶ್ರಮ."

"ನಾನು ಈ ಬಗೆಯಲ್ಲಿ ಶಿಕ್ಷಣವನ್ನು ಪಡೆದುಕೊಂಡಿದ್ದರೆ ಹೆಚ್ಚು ಆನಂದದಾಯಕ ಮತ್ತು ಫಲಪ್ರದವಾಗಿ ಬದುಕುತ್ತಿದ್ದೆ."

"ಒಬ್ಬ ಶ್ರೀಸಾಮಾನ್ಯನಾಗಿ ನಾನು ದೇಶದ ಶ್ರೀಸಾಮಾನ್ಯ ಓದುಗರಿಗೆ ಹೇಳುತ್ತಾ ಬಂದಿರುವ ಸಂಗತಿಗಳನ್ನು ಶಿಕ್ಷಣತಜ್ಞರಾದ ಡಾ. ಅರುಂಡೇಲ್ ಅವರು ಶಿಕ್ಷಣತಜ್ಞರಿಗೆ ಮತ್ತು ಯುವಜನತೆಯನ್ನು ರೂಪಿಸುವ ಹೊಣೆಯನ್ನು ಹೊತ್ತಿರುವ ಎಲ್ಲರಿಗೆ ಹೇಳಿದ್ದಾರೆ. ಸ್ವಯಂ ಪೋಷಿತ ಶಿಕ್ಷಣದ ಕುರಿತಾದ ಅವರ ಎಚ್ಚರಿಕೆಯ ಮಾತುಗಳಿಂದ ನನಗೆ ಆಶ್ಚರ್ಯವೇನೂ ಆಗಲಿಲ್ಲ. ಏಕೆಂದರೆ ನನಗೆ ಅದು ಇಡೀ ಯೋಜನೆಯ ಸಾರರೂಪ ಮತ್ತು ನಿರ್ಣಾಯಕ ಭಾಗ. ನನ್ನ ಒಂದು ಪಶ್ಚಾತ್ತಾಪವೆಂದರೆ ಮಸಿ ಹಿಡಿದ ಗಾಜಿನ ಮೂಲಕ ನಾನು ನಲವತ್ತು ವರ್ಷಗಳಿಂದ ನೋಡಿದ್ದು ಇಂದು ಸಾಂದರ್ಭಿಕ ಒತ್ತಡದ ಹಿನ್ನೆಲೆಯಲ್ಲಿ ಅತ್ಯಂತ ಸ್ಪಷ್ಟವಾಗಿ ಕಾಣುತ್ತಿದೆ.

ಪ್ರಸಕ್ತ ಶಿಕ್ಷಣವನ್ನು ನಾನು 1920 ರಲ್ಲಿ ಬಲವಾಗಿ ವಿರೋಧಿಸಿ ಮಾತನಾಡಿದ್ದೆ. ನನ್ನ ಸಹೋದ್ಯೋಗಿಗಳಾಗಿದ್ದು ದೇಶದ ಭವ್ಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನನ್ನ ಜೊತೆ ಅನುಭವಿಸಿದ, ಏಳು ಪ್ರಾಂತ್ಯಗಳ ಸಚಿವರನ್ನು ಪ್ರಭಾವಿಸಲು ನನಗೆ ಈಗ ಸ್ವಲ್ಪಮಟ್ಟಿಗಿನ ಅವಕಾಶ ದೊರೆತಿದೆ. ಈಗಿರುವ ಶಿಕ್ಷಣಪದ್ಧತಿಯು ನಖದಿಂದ ಶಿಖೆಯವರೆಗೆ ಸಂಪೂರ್ಣವಾಗಿ ತಪ್ಪಾಗಿದೆ ಎನ್ನುವ ಆರೋಪಕ್ಕೆ ತಕ್ಕ ಪ್ರತ್ಯುತ್ತರ ನೀಡಬೇಕೆನ್ನುವ ಒಳತುಡಿತ ನನ್ನಲ್ಲಿದೆ. ಈ ಅಂಕಣಗಳಲ್ಲಿ ಅಭಿವ್ಯಕ್ತಿಸಲು ನಾನು ತೊಳಲಾಡುತ್ತಿದ್ದೆ ಮತ್ತು ಅದೀಗ ಒಂದು ಮಿಂಚಿನಂತೆ ನನ್ನೆದುರು ಹೊಳೆಯಿತು. ಅದರ ಸತ್ಯವು ಪ್ರತಿದಿನವೂ ನನ್ನಲ್ಲಿ ಬೆಳೆಯುತ್ತಿದೆ. ಹಾಗಾಗಿ ಪೂರ್ವಗ್ರಹ ಹೊಂದಿರದ, ನನ್ನ ವಿರುದ್ಧ ಕತ್ತಿ ಮಸೆಯದಿರುವ ನಮ್ಮ ರಾಷ್ಟ್ರದ ಶಿಕ್ಷಣತಜ್ಞರನ್ನು ನಾನು ಕೇಳುತ್ತಲಿದ್ದೇನೆ., ನಿಮ್ಮ ಪೂರ್ವಗ್ರಹ ತುಂಬಿದ ಮತ್ತು ಸ್ಥಾಪಿತ ಅಭಿಮತಗಳು ನಿಮ್ಮ  ತಾರ್ಕಿಕತೆಯ ಹರಿವಿಗೆ ಅಡ್ಡಿಯಾಗದಂತೆ ನಾನು ಪ್ರತಿಪಾದಿಸಿರುವ ಎರಡು ಪ್ರಸ್ತಾಪಗಳನ್ನು ಪರಿಗಣಿಸಿ. ಶಿಕ್ಷಣ ಕುರಿತಾದ ನನ್ನ ಅಪಾರ ಮೌಢ್ಯವು– ತಾಂತ್ರಿಕ ಮತ್ತು ರೂಢಿಗತ ಅರ್ಥದಲ್ಲಿ –  ನಾನು ಹೇಳುತ್ತಿರುವ ವಿಷಯದ ಬಗ್ಗೆ ಅವರಿಗೆ ಪಕ್ಷಪಾತದ ಧೋರಣೆಗೆ ಎಡೆಗೊಡದಿರಲಿ. ವಿವೇಕವು ಅನೇಕಬಾರಿ ಮಕ್ಕಳಿಂದ ಮತ್ತು ಪುಟ್ಟ ಕಂದಮ್ಮಗಳಿಂದಲೂ ಬರುತ್ತದೆಂದು ಹೇಳುತ್ತಾರೆ. ಇದು ಕವಿಸ್ವಾತಂತ್ರ್ಯಕ್ಕೊಂದು

ಉದಾಹರಣೆ ಇರಬಹುದಾದರೂ ಕೆಲವೊಮ್ಮೆ ಹಾಗಾಗುತ್ತದೆ ಎನ್ನುವುದರಲ್ಲಿ ಅನುಮಾನವಿಲ್ಲ. ಪರಿಣತರು ಅದನ್ನು ಸಾಣೆ ಹಿಡಿದು ಅದಕ್ಕೊಂದು ವೈಜ್ಞಾನಿಕ ರೂಪವನ್ನು ನೀಡುತ್ತಾರೆ. ಆದ್ದರಿಂದ ನಾನು ಕೇವಲ ಗುಣಾತ್ಮಕ ಕಾರಣಗಳಿಗಾಗಿ ನನ್ನ ಪ್ರಸ್ತಾವನೆಯನ್ನು ಪರೀಕ್ಷಿಸಬೇಕೆಂದು ವಿನಂತಿಸಿಕೊಳ್ಳುತ್ತಿದ್ದೇನೆ. ಅದನ್ನು ನಾನಿಲ್ಲಿ ಮರುವ್ಯಾಖ್ಯಾನಿಸುತ್ತಿದ್ದೇನೆ. ಅದು ನಾನು ಈ ಅಂಕಣಗಳಲ್ಲಿ ಈ ಹಿಂದೆ ನಿರೂಪಿಸಿದಂತೆ ಅಲ್ಲ. ಈಗ ನಾನು ಹೇಳುತ್ತಾ ಹೋದಂತೆ ನನಗೆ ತೋರಿದ ಭಾಷೆಯಲ್ಲಿ ಹೇಳುತ್ತಿದ್ದೇನೆ.

1. ಇಂದು ನಾವು ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲಾ ಶಿಕ್ಷಣವೆಂದು ಕರೆಯುತ್ತಿರುವ ಶಿಕ್ಷಣವನ್ನು ನಾವು ಏಳು ಅಥವಾ ಹೆಚ್ಚು ವರ್ಷಗಳ ಅವಧಿಯ, ಮೆಟ್ರಿಕ್ಯುಲೇಷನ್ ಮಟ್ಟದಲ್ಲಿ ಕಲಿಯುವ ಎಲ್ಲ ವಿಷಯಗಳನ್ನೂ ( ಇಂಗ್ಲೀಷ್ ಹೊರತುಪಡಿಸಿ)  ಒಳಗೊಳ್ಳುವ ಪ್ರಾಥಮಿಕ ಶಿಕ್ಷಣ ರೂಪಿಸಬೇಕು. ಇದರೊಟ್ಟಿಗೆ ಹುಡುಗರು ಮತ್ತು ಹುಡುಗಿಯರ ಮಾನಸಿಕ ಸಾಮರ್ಥ್ಯವನ್ನು ಎಲ್ಲ ಜ್ಞಾನಶಾಖೆಗಳಲ್ಲಿಯೂ ತೆರೆದುಕೊಳ್ಳುವಂತೆ ಮಾಡುವ ಸಾಧನವನ್ನಾಗಿ ವೃತ್ತಿ ತರಬೇತಿಯನ್ನು ಬಳಸುವುದು.

2. ಈ ಬಗೆಯ ಶಿಕ್ಷಣವು ಇಡಿಯಾಗಿ ನೋಡಿದಾಗ, ಸ್ವಯಂ ಪೋಷಿತವಾಗಿರಬೇಕು ಮತ್ತು ಅದು ಸಾಧ್ಯವಿದೆ. ನಿಜಕ್ಕೂ ಸ್ವಯಂ ಪೋಷಿತವಾಗಬೇಕಿರುವುದು ಅ ಮಾದರಿಯ ವಾಸ್ತವತೆಯ ಅತ್ಯಂತ ಪ್ರಮುಖ ಸತ್ವಪರೀಕ್ಷೆ.
ಹರಿಜನ್, 2–10–'37

## 19

## ಬಾಂಬೆ(ಈಗಿನ ಮುಂಬೈ)ಯಲ್ಲಿ ಪ್ರಾಥಮಿಕ ಶಿಕ್ಷಣ

ಪ್ರಾಥಮಿಕ ಶಿಕ್ಷಣದ ಕುರಿತಾಗಿ ಚರ್ಚಿಸುವಾಗ ಉದ್ದೇಶಪೂರ್ವಕವಾಗಿಯೇ ನನ್ನನ್ನು ನಾನು ಹಳ್ಳಿಗಳಿಗೆ ಸೀಮಿತಗೊಳಿಸಿಕೊಂಡಿದ್ದೆ. ಏಕೆಂದರೆ, ಭಾರತದ ಹೆಚ್ಚಿನ ಜನರು ಹಳ್ಳಿಗಳಲ್ಲಿಯೇಇದ್ದಾರೆ. ಹಳ್ಳಿಗಳ ಸಮಸ್ಯೆಗಳನ್ನು ಯಶಸ್ವಿಯಾಗಿ ಪರಿಹರಿಸಿದರೆ ನಗರಗಳ ಸಮಸ್ಯೆಗಳನ್ನೂ ಸಹ ಪರಿಣಾಮಕಾರಿಯಾಗಿ ಬಗೆಹರಿಸಿದಂತೆಯೇ ಆಗುತ್ತದೆ. ಆದರೆ ಬಾಂಬೆ ಶಹರದಲ್ಲಿನ ಪ್ರಾಥಮಿಕ ಶಿಕ್ಷಣದ ಬಗ್ಗೆ ಆಸಕ್ತಿ ಹೊಂದಿರುವ ಗೆಳೆಯರೊಬ್ಬರು ಈ ಕೆಳಗಿನ ಪ್ರಶ್ನೆಯನ್ನು ಎತ್ತಿದ್ದಾರೆ:

"ಕಾಂಗ್ರೆಸ್ ಸಚಿವ ಸಂಪುಟವು ಪ್ರಾಥಮಿಕ ಶಿಕ್ಷಣಕ್ಕೆ ಹಣ ಹೊಂದಿಸುವ ಬಗ್ಗೆ ಮಾತ್ರ ಮಗ್ನವಾಗಿರುವಂತೆ ಕಾಣುತ್ತದೆ. ಪ್ರಾಥಮಿಕ ಶಿಕ್ಷಣವನ್ನು ಸ್ವಯಂ ಪೋಷಿತವನ್ನಾಗಿ ಮಾಡಬೇಕೆಂಬ ಕೂಗೇನೋ ದಟ್ಟವಾಗಿಯೇ ಇದೆ. ಆದ್ದರಿಂದಇದನ್ನು ಬಾಂಬೆಯಂಥ ಶಹರದಲ್ಲಿ ಅನುಷ್ಠಾನಗೊಳಿಸುವುದುಎಷ್ಟರಮಟ್ಟಿಗೆ ಸಾಧ್ಯ ಎಂದು ಪರೀಕ್ಷಿಸುವುದು ಉಪಯುಕ್ತ.ಬಾಂಬೆ ಕಾರ್ಪೋರೇಷನ್‌ನ ಶಿಕ್ಷಣದ ವಾರ್ಷಿಕ ಬಜೆಟ್ ಸುಮಾರು 35–36 ಲಕ್ಷ ರೂಪಾಯಿಗಳು. ಆದರೆ ಬಾಂಬೆಯಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣನ್ನು ನೀಡುವ ಕನಸು ಸಾಕಾರಗೊಳ್ಳಬೇಕಾದರೆ ಈ ಮೊತ್ತಕ್ಕೆ ಇನ್ನೂ ಹಲವು ಲಕ್ಷಗಳನ್ನಾದರೂ ನಾವು ಸೇರಿಸಬೇಕಾಗುತ್ತದೆ. ಪ್ರಸಕ್ತ ಇಪ್ಪತ್ತು ಲಕ್ಷ ರೂಪಾಯಿಗಳನ್ನು ಶಿಕ್ಷಕರ ವಾರ್ಷಿಕ ವೇತನಕ್ಕೆ ಖರ್ಚು ಮಾಡಲಾಗುತ್ತಿದೆ. ಮತ್ತೆ ನಾಲ್ಕು ಲಕ್ಷ ರೂಪಾಯಿಗಳು ಬಾಡಿಗೆಗೆ ಖರ್ಚಾಗುತ್ತದೆ. ಅಂದರೆ ಪ್ರತಿ ಮಗುವಿಗೂ ವರ್ಷಕ್ಕೆ 40 ರಿಂದ 42 ರೂ. ಖರ್ಚಾಗುತ್ತದೆ. ಒಬ್ಬ ವಿದ್ಯಾರ್ಥಿಯು ಇದನ್ನು ತನ್ನ ವೃತ್ತಿ ತರಬೇತಿಯಲ್ಲಿ ಗಳಿಸಬಹುದೇ? ಇಲ್ಲದಿದ್ದರೆ, ಪ್ರಾಥಮಿಕ ಶಿಕ್ಷಣವು ಸ್ವಯಂ ಪೋಷಿತವಾಗಲು ಹೇಗೆ ಸಾಧ್ಯವಾಗಬಹುದು?"

ವೃತ್ತಿ ಆಧಾರಿತ ಪ್ರಾಥಮಿಕ ಶಿಕ್ಷಣವು ಬಾಂಬೆಯಂಥ ಶಹರ ಮತ್ತು ಅಲ್ಲಿನ ಮಕ್ಕಳಿಗೆ ಒಳಿತನ್ನೇ ಮಾಡುತ್ತದೆ ಎನ್ನುವುದರ ಬಗ್ಗೆ ನನಗೆ ಸ್ವಲ್ಪವೂ ಅನುಮಾನವಿಲ್ಲ. ಇಂದಿನ ಪರಿಸ್ಥಿತಿಯನ್ನು ಅವಲೋಕಿಸಿ ನೋಡಿದರೆ ಅಲ್ಲಿನ ಪ್ರಾಥಮಿಕ ಶಿಕ್ಷಣ ಕೋರ್ಸಿನ ಕೊನೆಯ ವೇಳೆಗೆ ಹೇಳಿಕೊಳ್ಳುವಂಥ ಸಾಧನೆಗಳೇನೂ ಆಗಿರುವುದಿಲ್ಲ. ಒಬ್ಬ ನಾಗರಿಕನನ್ನಾಗಿ ರೂಪಿಸುವುದರಲ್ಲಿಯಂತೂ ಏನೇನೂ ಆಗಿರುವುದಿಲ್ಲ.

ಶಹರಗಳಲ್ಲಿ ವೃತ್ತಿ ಆಧಾರಿತ ಪ್ರಾಥಮಿಕ ಶಿಕ್ಷಣವನ್ನು ಅನುಷ್ಠಾನಗೊಳಿಸಬೇಕೆಂದು ಶಿಫಾರಸು ಮಾಡಲು ನನಗೆ ಯಾವ ಹಿಂಜರಿಕೆಯೂ ಇಲ್ಲ. ಬಾಂಬೆಯ ಪ್ರಾಥಮಿಕ ಶಿಕ್ಷಣಕ್ಕಾಗಿ ಈಗ ಖರ್ಚು ಮಾಡುತ್ತಿರುವ 35 ಲಕ್ಷ ರೂ. ಗಳಲ್ಲಿ ಪೂರ್ಣವಾಗಿ ಅಲ್ಲದಿದ್ದರೂ ಹೆಚ್ಚಿನಂಶ ಹಣವನ್ನು ಉಳಿಸಲು ಇದರಿಂದ ಸಾಧ್ಯ. ಪ್ರಾಥಮಿಕ ಶಿಕ್ಷಣ ನೀಡಲು ಒಂದು ಮಗುವಿಗೆ ಒಂದು ವರ್ಷಕ್ಕೆ ಈಗ ಮಾಡುವ ಖರ್ಚನ್ನು 40 ರೂ. ಎಂದಿಟ್ಟುಕೊಂಡರೂ ಬಾಂಬೆ ಕಾರ್ಪೊರೇಷನ್ ನೀಡುವ ಅನುದಾನದಿಂದ 87,000 ಮಕ್ಕಳು ಶಿಕ್ಷಣ ಪಡೆಯುತ್ತಿದ್ದಾರೆ. ಅಲ್ಲಿನ ಜನಸಂಖ್ಯೆಯನ್ನು ಹತ್ತು ಲಕ್ಷ ಎಂದಿಟ್ಟುಕೊಂಡರೆ, ಶಾಲೆಗೆ ಹೋಗುವ ವಯಸ್ಸಿನ ಮಕ್ಕಳು ಅಂದಾಜು ಒಂದೂವರೆ ಲಕ್ಷವಾದರೂ ಇರಬೇಕು. ಹಾಗಾಗಿ, 62,000 ಮಕ್ಕಳು ಪ್ರಾಥಮಿಕ ಶಿಕ್ಷಣದಿಂದ ವಂಚಿತರಾಗಿದ್ದಾರೆ. ಇದರಲ್ಲಿಯೂ 6,000 ಮಕ್ಕಳು ಖಾಸಗಿ ಶಿಕ್ಷಣವನ್ನು ಪಡೆಯುತ್ತಿರಬಹುದು ಎನ್ನೋಣ. ಇನ್ನೂ ಅಂದಾಜು 56,000ಮಕ್ಕಳಿಗೆ ಪ್ರಾಥಮಿಕ ಶಿಕ್ಷಣವನ್ನು ನೀಡಬೇಕಾಗುತ್ತದೆ. ಅದಕ್ಕಾಗಿ ನಮಗೆ ಈಗಿನ ಲೆಕ್ಕದಲ್ಲಿ 22,40,000 ರೂಪಾಯಿಗಳ ಅವಶ್ಯಕತೆ ಇದೆ. ಈ ದುರಿತಕಾಲದಲ್ಲಿ ಇಷ್ಟೊಂದು ಹಣವನ್ನು ಹೊಂದಿಸುವ ಸಾಧ್ಯತೆಯೇ ನನಗೆ ಕಾಣುತ್ತಿಲ್ಲ*.

ಭಾರತ ದೇಶಕ್ಕೆ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣ ಬೇಕೆಂದು ನಾನು ಬಲವಾಗಿ ನಂಬುತ್ತೇನೆ. ನಾವು ಮಕ್ಕಳಿಗೆ ಒಂದು ಉಪಯುಕ್ತ ಕಸುಬನ್ನು ಕಲಿಸುವುದರಿಂದ ಹಾಗೂ ಮಕ್ಕಳ ಮಾನಸಿಕ, ದೈಹಿಕ ಮತ್ತು ಆಧ್ಯಾತ್ಮಿಕ ಶಕ್ತಿಗಳನ್ನು ಪೋಷಿಸಲು ಆ ಕಸುಬನ್ನು ಬಳಸುವುದರ ಮೂಲಕ ಮಾತ್ರಇದು ಸಾಧ್ಯವಾಗುತ್ತದೆಯೆಂದೂ ನಾನು ಪ್ರತಿಪಾದಿಸುತ್ತೇನೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಈ ಆರ್ಥಿಕ ಲೆಕ್ಕಾಚಾರಗಳನ್ನು ಅನಗತ್ಯವೆಂದಾಗಲೀ, ಕೀಳೆಂದಾಗಲೀ ಪರಿಗಣಿಸಬಾರದು. ಆರ್ಥಿಕ ವಿದ್ಯಮಾನಗಳ ಬಗ್ಗೆ ಕೀಳು ಎಂದು ಭಾವಿಸುವಂತಹುದು ಏನೇನೂ ಇಲ್ಲ. ನಿಜವಾದ ಆರ್ಥಿಕತೆಯು ಅತ್ಯುನ್ನತ ನೈತಿಕತೆಯ ವಿರೋಧಿಯಲ್ಲವೇ ಅಲ್ಲ. ಹಾಗೆ ನೋಡಿದರೆ, ಎಲ್ಲ ನೈತಿಕ ಮೌಲ್ಯಗಳೂ ನೈಜವಾಗಿಯೂ, ಉಪಯುಕ್ತವೂ ಆಗಿರಬೇಕಾದರೆ ಅವು ಆರ್ಥಿಕವಾಗಿಯೂ ಸದೃಢವಾಗಿರಬೇಕಾಗುತ್ತದೆ.

ಉಳ್ಳವರು ಬಡವರನ್ನು ಶೋಷಿಸುತ್ತಾ ಸಂಪತ್ತನ್ನು ಕ್ರೋಢೀಕರಿಸುವ ಸಲುವಾಗಿ ಧನದೇವತೆಯ ಆರಾಧನೆಯನ್ನು ವೈಭವೀಕರಿಸುವ ಆರ್ಥಿಕತೆಯು ಸುಳ್ಳು ಮತ್ತು ವಿಷಾದಕರ ಎನ್ನಬಹುದು. ಇದು ಮರಣದ ಪ್ರತೀಕ. ನಿಜವಾದ ಆರ್ಥಿಕತೆಯು ಸಾಮಾಜಿಕ ನ್ಯಾಯಪರತೆಯ ಕಡೆಗೆ ಸಾಗುತ್ತದೆ. ಅದು ಎಲ್ಲರ – ಅತೀ ದುರ್ಬಲ ವರ್ಗದವರನ್ನೂ ಸೇರಿಸಿ – ಒಳಿತನ್ನೂ ಅಭಿವರ್ಧಿಸುತ್ತದೆ ಹಾಗೂ ಉತ್ತಮ ಬದುಕಿಗೆ ಅದು ಅನಿವಾರ್ಯವಾಗಿದೆ. ಈ ಕಾರಣದಿಂದ ಮಕ್ಕಳಿಗೆ ಒಂದು ವೃತ್ತಿಯನ್ನು ಕಲಿಸಿ, ಅದರ ಮೂಲಕ ಪ್ರಾಥಮಿಕ ಶಿಕ್ಷಣದ ಖರ್ಚನ್ನು ಗಳಿಸಲು ಸಾಧ್ಯವಾದರೆ ಬಾಂಬೆಯು ಇಡೀ ದೇಶಕ್ಕೆ ಒಂದು ಅದ್ಭುತ

---

*ಕೊನೆಯ ವಾಕ್ಯವೊಂದನ್ನು ಹೊರತುಪಡಿಸಿ ಎಲ್ಲವನ್ನೂ 'ಹರಿಜನ ಬಂಧು' ಪತ್ರಿಕೆಯಿಂದ ತೆಗೆದುಕೊಳ್ಳಲಾಗಿದೆ ಮತ್ತು ಅದನ್ನು ಗುಜರಾತಿಯಿಂದ ಇಂಗ್ಲೀಷಿಗೆ ಅನುವಾದಿಸಲಾಗಿದೆ.

ಉದಾಹರಣೆಯನ್ನು ಜನರ ಕಣ್ಣೆದುರಿಗಿಡುವುದೆಂದು ನಾನು ಭಾವಿಸುತ್ತೇನೆ. ಮಕ್ಕಳು ಪ್ರತಿದಿನ ನಾಲ್ಕು ಗಂಟೆಗಳ ಕಾಲ ಮತ್ತು ತಿಂಗಳಲ್ಲಿ 25 ದಿನ ಈ ಕೆಲಸದಲ್ಲಿ ತೊಡಗುತ್ತಾರೆ ಹಾಗೂ ಗಂಟೆಗೆ ಎರಡು ಪೈಸೆ ಕೂಲಿ ಎಂದಿಟ್ಟುಕೊಂಡರೆ ಅವರಿಂದ ಶಾಲೆಗೆ ಪ್ರತಿ ತಿಂಗಳೂ Rs. 3–2–0ಆದಾಯ ಬರುತ್ತದೆ. ಈ ಬಗೆಯ ಕಸುಬುಗಾರಿಕೆಯು ವಿದ್ಯಾರ್ಥಿಯ ಮನಸ್ಸನ್ನು ತಾಜಾ ಆಗಿಟ್ಟುಕೊಳ್ಳುವುದಲ್ಲದೆ ಅವರ ಧೀಶಕ್ತಿಯನ್ನು ಹೊರಗೆಳೆಯುವ ವಿಧಾನವೊಂದನ್ನೂ ನಮಗೆ ನೀಡುತ್ತದೆ.ಮೊದಲ ದಿನದಿಂದಲೇ ಮಗುವು ಗಂಟೆಗೆ ಎರಡು ಪೈಸೆಯಂತೆ ಕೊಡಬೇಕೆಂದುಇದರರ್ಥವಲ್ಲ. ಆದರೆ ಏಳು ವರ್ಷಗಳ ಒಟ್ಟು ಅವಧಿಯಲ್ಲಿ ಅವನು ಗಂಟೆಗೆ ಎರಡು ಪೈಸೆಯಂತೆ ಕೊಡುತ್ತಾನೆ.

ಈ ತರಹದ ಶಿಕ್ಷಣವು ನೀರಸವಾಗಿದ್ದು ಮಗುವಿನ ಮನಸ್ಸಿನ ಬೆಳವಣಿಗೆಯನ್ನು ನಿರ್ಬಂಧಿಸುತ್ತದೆ ಎಂದು ಯೋಚಿಸುವುದು ಬಲುದೊಡ್ಡ ಮೂಢನಂಬಿಕೆಯಾಗಿದೆ. ಸಮರ್ಥ ಶಿಕ್ಷಕರಿಂದ ವೃತ್ತಿ ಸಂಬಂಧಿತ ತರಬೇತಿಯನ್ನು ಪಡೆದುಕೊಳ್ಳುತ್ತಿರುವಾಗ ಮಕ್ಕಳ ಮುಖದಲ್ಲಿನ ಆನಂದದ ಕಳೆಯು ನನ್ನ ಅತ್ಯಂತ ಸಂತೋಷದಾಯಕ ನೆನಪುಗಳಲ್ಲಿ ಒಂದು. ಇದಕ್ಕೆ ತದ್ವಿರುದ್ಧವಾಗಿ, ಒಬ್ಬ ಅಸಮರ್ಥ ಶಿಕ್ಷಕ ತಪ್ಪುತಪ್ಪಾಗಿ ಬೋಧಿಸಿದಾಗ, ಅತ್ಯಂತ ರೋಚಕ ವಿಷಯಗಳೂ ಸಹ ಮಕ್ಕಳಿಗೆ ಬೇಸರ ಹುಟ್ಟಿಸಿದ್ದನ್ನೂ ನೋಡಿದ್ದೇನೆ. ಆದರೆ, ನಮಗೆ ಬೇಕಿರುವ ತರಹದ ದಕ್ಷ ಶಿಕ್ಷಕರು ಎಲ್ಲಿಂದ ಬರುತ್ತಾರೆ ಎಂದು ಯಾರಾದರೂ ಕೇಳಬಹುದು. ಇದಕ್ಕೆ ನನ್ನ ಉತ್ತರವೆಂದರೆ "ಅವಶ್ಯಕತೆಯು ಆವಿಷ್ಕಾರದ ತಾಯಿ". ನಮ್ಮ ಶೈಕ್ಷಣಿಕ ಕಾರ್ಯನೀತಿಯನ್ನು ಪುನಾರೂಪಿಸುವ ಅಗತ್ಯವನ್ನು ನಾವು ಮನಗಂಡರೆ, ಅದನ್ನು ಸಾಧ್ಯವಾಗಿಸಲು ಬೇಕಿರುವ ಸಿದ್ಧತೆಗಳನ್ನು ಮಾಡಿಕೊಳ್ಳುವುದು ಅಂಥ ಕಷ್ಟವೇನೂ ಅಲ್ಲ. ಪ್ರಸಕ್ತ ಶಿಕ್ಷಣ ವ್ಯವಸ್ಥೆಯಲ್ಲಿನ ಖರ್ಚಿನ ಒಂದು ಅತ್ಯಲ್ಪ ಭಾಗದಲ್ಲಿ ತರಬೇತಿ ನೀಡಿ ನಮ್ಮ ಕೆಲಸಗಳಿಗೆ ಅಗತ್ಯವಿರುವ ಕುಶಲಕರ್ಮಿ ಶಿಕ್ಷಕರನ್ನು ಸಿದ್ಧಗೊಳಿಸಬಹುದು. ನಾನು ಸೂಚಿಸಿರುವ ಪ್ರಾಥಮಿಕ ಶಿಕ್ಷಣ ಯೋಜನೆಯ ಬಗ್ಗೆ ತೀವ್ರ ಹಾಗೂ ಪ್ರಾಮಾಣಿಕ ಆಸಕ್ತಿಯುಳ್ಳ ಮತ್ತು ಅದನ್ನು ತಕ್ಷಣವೇಅನುಷ್ಠಾನಗೊಳಿಸಲು ಉತ್ಸುಕರಾಗಿರುವ (ಬಾಂಬೆಯ) ಶಿಕ್ಷಣ ಪರಿಣತರ ಸಮಿತಿಗೆ ಇದು ಖಂಡಿತ ಸಾಧ್ಯವಾಗಬೇಕು. ಆದರೆ ಅವರಿಗೆ ಈ ವಿಚಾರದಲ್ಲಿ ನನಗಿರುವಷ್ಟೇ ದೃಢ ನಂಬಿಕೆ ಇರಬೇಕು. ಅಂಥ ನಂಬಿಕೆ ಕೇವಲ ಮನಸ್ಸಿನಾಳದಿಂದ ಮಾತ್ರವೇ ಬರಲು ಸಾಧ್ಯವಿದೆ; ಅದು ಬೇರೊಬ್ಬರ ಅನುಭವವನ್ನು ಪಡೆಯುವುದರಿಂದ ಬರುವುದಿಲ್ಲ. ಆಳವಾದ ನಂಬಿಕೆಯಿಲ್ಲದೆ ಈ ಜಗತ್ತಿನಲ್ಲಿ ಯಾರೂ ಯಾವುದನ್ನೂ ಸಾಧಿಸಲಾಗಿಲ್ಲ.

ಶಹರದ ಶಾಲೆಗಳಲ್ಲಿ ಮಕ್ಕಳಿಗೆ ಕಲಿಸಲು ಯಾವ ಬಗೆಯ ವೃತ್ತಿಗಳು ಸಮರ್ಪಕವಾಗಿವೆ? ಇದರ ಬಗ್ಗೆ 'ಇದಮಿತ್ಥಂ'ಎಂದು ಖಚಿತ ಗೆರೆ ಎಳೆಯಲು ಸಾಧ್ಯವಿಲ್ಲ.ಆದರೆ ನನ್ನ ಉತ್ತರ ಸ್ಪಷ್ಟವಿದೆ.ನಾನು ನಮ್ಮ ಹಳ್ಳಿಗಳಿಗೆ ಮರುಜೀವ ನೀಡಲು ಬಯಸುತ್ತೇನೆ. ಇಂದು ನಮ್ಮ ಹಳ್ಳಿಗಳು ಶಹರಗಳೆಂಬ ಬಸವನ ಬಾಲದಂತಿದ್ದು ಕೇವಲ ಅವುಗಳ ವಿಸ್ತರಣೆಯಂತೆಯೇ ಭಾಸವಾಗುತ್ತದೆ. ಅವು ಶಹರಗಳಿಂದ ಶೋಷಣೆಗೊಳಪಡಲೆಂದೇ ಇರುವಂತೆ ತೋರುತ್ತಿದ್ದು, ಶಹರಗಳ ಸಂಕಟವನ್ನೇ ಅವಲಂಬಿಸಿದೆ. ಇದು ನಿಜಕ್ಕೂ ಅಸಹಜ. ಶಹರಗಳು ನಮ್ಮ ಹಳ್ಳಿಗಳನ್ನು ತಮ್ಮ ಸ್ವಾರ್ಥದ ಕಾರಣಗಳಿಗಾಗಿ ಶೋಷಣೆ ಮಾಡುವುದನ್ನು ಬಿಟ್ಟು, ತಾವು ಹಳ್ಳಿಗಳಿಂದ ಪಡೆದ ಶಕ್ತಿ ಮತ್ತು ಪೋಷಣೆಗಾಗಿ ಸೂಕ್ತ ಪ್ರತಿಫಲವನ್ನು ನೀಡಬೇಕಿರುವ ತಮ್ಮ ಕರ್ತವ್ಯವನ್ನು ಅರಿತುಕೊಂಡಾಗ ಮಾತ್ರ ಇವೆರಡರ ನಡುವೆ ಆರೋಗ್ಯಕರ ಮತ್ತು ನೈತಿಕ ಸಂಬಂಧವು ಸಾಧ್ಯವಾಗುತ್ತದೆ. ಈ ಸಾಮಾಜಿಕ ಪುನಾರಚನೆಯಮಹತ್ತರ ಹಾಗೂ ಉದಾತ್ತ ಕಾರ್ಯದಲ್ಲಿ ಶಹರದ ಮಕ್ಕಳು ತಮ್ಮ ಕೊಡುಗೆಯನ್ನು ನೀಡಬೇಕೆಂದರೆ, ಅವರು ಯಾವುದರ ಮೂಲಕ ಶಿಕ್ಷಣ ಪಡೆಯುತ್ತಾರೋ ಆ ವೃತ್ತಿಯು ನೇರವಾಗಿ ಹಳ್ಳಿಗಳ ಅಗತ್ಯಗಳಿಗೆ

ಸಂಬಂಧಿಸಿರಬೇಕು. ಹತ್ತಿ ಉದ್ದಿಮೆಗೆ ಸಂಬಂಧಿಸಿದ ಕಸುಬುಗಳಾದ ಹತ್ತಿ ಹಿಂಜುವುದು, ಸ್ವಚ್ಛಗೊಳಿಸುವುದು, ನೂಲು ತೆಗೆಯುವುದು ಮತ್ತು ಬಟ್ಟೆ ತಯಾರಿಸುವುದು ಇವು ಇನ್ನಾವುದೇ ಆಯ್ಕೆಗಿಂತಲೂ ಹೆಚ್ಚು ಸಮಂಜಸವಾಗಿವೆ ಎನಿಸುತ್ತದೆ. ಇಂದಿಗೂ ಕೂಡ ಹತ್ತಿಯನ್ನು ಹಳ್ಳಿಗಳಲ್ಲಿ ಬೆಳೆಯಲಾಗುತ್ತಿದೆ ಮತ್ತು ಶಹರಗಳಲ್ಲಿ ಅದನ್ನು ಹಿಂಜಿ, ನೂಲು ತೆಗೆದು ಹತ್ತಿಯನ್ನು ತಯಾರಿಸಲಾಗುತ್ತದೆ. ಆದರೆ ಬಟ್ಟೆಯನ್ನು ತಯಾರಿಸಲು ಕಾರ್ಖಾನೆಗಳಲ್ಲಿ ಹತ್ತಿಗೆ ಮೊದಲಿನಿಂದ ಕೊನೆಯವರೆಗೆ ಮಾಡುವ ಸಂಸ್ಕರಣ ಕಾರ್ಯಗಳು ಕಾರ್ಮಿಕರು, ಸಾಮಗ್ರಿಗಳು ಮತ್ತು ಯಾಂತ್ರಿಕ ಶಕ್ತಿಗಳ ಅಪವ್ಯಯ ಬಲು ದೊಡ್ಡದು.

ಹೀಗಾಗಿ, ಗ್ರಾಮೀಣ ಕುಶಲಕಲೆಗಳಾದ ನೂಲುವುದು ಮತ್ತು ಹಿಂಜುವುದು ಇತ್ಯಾದಿ ಇವುಗಳ ಮೂಲಕ ಪ್ರಾಥಮಿಕ ಶಿಕ್ಷಣವನ್ನು ನೀಡಬೇಕೆಂದಿರುವ ಯೋಜನೆಯು ದೂರಗಾಮಿ ಪರಿಣಾಮಗಳುಳ್ಳ ಮೌನ ಕ್ರಾಂತಿಯೊಂದರ ಮುಂಚೂಣಿಯಲ್ಲಿರುವಂತೆ ರೂಪಿಸಲಾಗಿದೆ.ಅದು ಶಹರ ಮತ್ತು ಹಳ್ಳಿಗಳ ನಡುವಿನ ಬಾಂಧವ್ಯಕ್ಕೆ ಒಂದು ಆರೋಗ್ಯಪೂರ್ಣ ಮತ್ತು ನೈತಿಕ ತಳಹದಿಯನ್ನು ಒದಗಿಸುತ್ತದೆ ಮತ್ತು ಅದರ ಮೂಲಕ, ಈಗಿನ ಸಾಮಾಜಿಕ ಅಭದ್ರತೆ ಹಾಗೂ ವರ್ಗಗಳ ನಡುವೆ ಇರುವ ವಿಷಯುಕ್ತ ವಾತಾವರಣದ ದುಷ್ಪರಿಣಾಮಗಳನ್ನು ತೊಡೆದುಹಾಕುವ ಪ್ರಯತ್ನದಲ್ಲಿ ಒಂದು ಬಹು ದೊಡ್ಡ ಹೆಜ್ಜೆಯಾಗುತ್ತದೆ. ಅದು ನಮ್ಮ ಹಳ್ಳಿಗಳ ನಿರಂತರಅವನತಿಯನ್ನು ತಡೆಗಟ್ಟಿ, ನ್ಯಾಯಯುತ ಸಾಮಾಜಿಕ ವ್ಯವಸ್ಥೆಗೆ ಅಡಿಪಾಯವನ್ನು ಹಾಕುತ್ತದೆ. ಅಲ್ಲಿ "ಉಳ್ಳವರ" ಮತ್ತು "ಇಲ್ಲದವರ" ನಡುವೆ ಅಸಹಜ ತಾರತಮ್ಯವಿರುವುದಿಲ್ಲ. ಪ್ರತಿಯೊಬ್ಬರಿಗೂ ಬದುಕಲು ವೇತನ ಮತ್ತು ಸ್ವಾತಂತ್ರ್ಯದ ಹಕ್ಕು ದೊರೆಯುತ್ತದೆ. ಇವೆಲ್ಲವೂ ರಕ್ತಸಿಕ್ತ ವರ್ಗ ಕ್ರಾಂತಿಯ ಭಯ–ಕರಾಳತೆಯಿಲ್ಲದೆ ಅಥವಾ ಭಾರತದಂಥ ದೊಡ್ಡ ದೇಶದಲ್ಲಿ ಯಾಂತ್ರೀಕರಣ ಸಾಧ್ಯವಾಗುವಂತೆ ಮಾಡಲು ಬೇಕಿರುವ ಬೃಹತ್ ಪ್ರಮಾಣದ ಬಂಡವಾಳದ ಅವಶ್ಯಕತೆಯಿಲ್ಲದೆ ಸಾಧಿಸಬಹುದು. ಇದನ್ನು ಅನುಷ್ಠಾನಗೊಳಿಸಲು ವಿದೇಶದಿಂದ ಆಮದು ಮಾಡಿಕೊಂಡ ಯಂತ್ರಗಳು ಅಥವಾ ತಾಂತ್ರಿಕ ಜ್ಞಾನದ ಮೇಲಿನ ಅಸಹಾಯಕ ಅವಲಂಬನವೂ ಬೇಕಿಲ್ಲ. ಕೊನೆಯದಾಗಿ, ಹೆಚ್ಚಿನ ಪ್ರಾವೀಣ್ಯತೆ ಅಥವಾ ಪ್ರತಿಭೆಯ ಅಗತ್ಯವಿಲ್ಲದಿರುವುದರಿಂದ ಸಮುದಾಯದ ಭವಿಷ್ಯವನ್ನು ಅವರ ಕೈಗೇ ನೀಡಿದಂತಾಗುತ್ತದೆ. ಆದರೆ ಬೆಕ್ಕಿನ ಕೊರಳಿಗೆ ಗಂಟೆ ಕಟ್ಟುವವರು ಯಾರು? ಶಹರದ ನಿವಾಸಿಗಳು ನನ್ನ ಮಾತುಗಳನ್ನು ಕೇಳುತ್ತಾರೇನು? ಅಥವಾ ನನ್ನದು ಕೇವಲ ಅರಣ್ಯರೋದನವಾಗಬಹುದೇ? ಈ ಮತ್ತು ಇಂಥ ಇತರ ಪ್ರಶ್ನೆಗಳಿಗೆ ಉತ್ತರವು ನನಗಿಂತ ಹೆಚ್ಚಾಗಿ ಈ ಪತ್ರ ಬರೆದಿರುವ ಶಹರವಾಸಿ ಶಿಕ್ಷಣಪ್ರೇಮಿಗಳ ಮೇಲೆ ಅವಲಂಬಿಸಿದೆ.

ಹರಿಜನ್, 9–10–'37

## 20

## ನಿಜವಾದ ಪರೀಕ್ಷೆ"ಶಾಲೆ ಸ್ವಯಂ ಪೋಷಿತವೇ?" ಎನ್ನುವುದಲ್ಲ

ಕುಶಲಕಲೆಗಳ ಮೂಲಕ ಶಿಕ್ಷಣದ ಕುರಿತಾಗಿ ಮಾತನಾಡುತ್ತಾ ಗಾಂಧೀಜಿಯವರು ಹೀಗೆ ಹೇಳಿದರು:

" ಆ ತರಹದ ಶಿಕ್ಷಣವನ್ನು ನೀಡಿದರೆ ಅದರ ನೇರ ಫಲಿತವೆಂದರೆ ಶಿಕ್ಷಣವು ಸ್ವಯಂ ಪೋಷಿತವಾಗುತ್ತದೆ. ಆದರೆ ಅದರ ಯಶಸ್ಸಿನ ಪರೀಕ್ಷೆ ಅದಲ್ಲ. ಬದಲಾಗಿ ವೈಜ್ಞಾನಿಕ ವಿಧಾನಗಳಿಂದ ಕುಶಲಕರ್ಮಗಳನ್ನು ಕಲಿಸುವ ಮೂಲಕ ಸಮಗ್ರ ವ್ಯಕ್ತಿತ್ವವು ವಿಕಸಿಸುವಂತೆ ಮಾಡುವುದೇ ನಿಜವಾದ ಪರೀಕ್ಷೆ.ಯಾವುದೇ ಸನ್ನಿವೇಶದಲ್ಲಿಯೂ ಅದನ್ನು ಸ್ವಯಂಪೋಷಿತ ಶಿಕ್ಷಣವನ್ನಾಗಿ

ಮಾಡಿಯೇ ತೀರುತ್ತೇನೆ ಎಂದು ಭರವಸೆ ನೀಡುವ ಶಿಕ್ಷಕನನ್ನು ನಾನು ನಿರಾಕರಿಸುತ್ತೇನೆ. ವಿದ್ಯಾರ್ಥಿಯು ತನ್ನ ಎಲ್ಲ ಸಾಮರ್ಥ್ಯಗಳನ್ನೂ ಬಳಸಲು ಕಲಿತರೆ ಆಗ ಸ್ವಯಂ ಪೋಷಿತ ಶಿಕ್ಷಣವು ಅದರ ಆನುಷಂಗಿಕ ಅಥವಾ ಪ್ರಾಸಂಗಿಕ ಫಲಿತವಾಗುತ್ತದೆ.ಕುಶಲಕರ್ಮ ಮಾಡುವ ಹುಡುಗನೊಬ್ಬ ದಿನಕ್ಕೆ ಮೂರು ಗಂಟೆ ಕೆಲಸ ಮಾಡಿ ತನ್ನ ನ್ಯಾಯಯುತ ಸಂಬಳವನ್ನು ಗಳಿಸುತ್ತಾನಾದರೆ ತನ್ನ ಕೆಲಸದೊಟ್ಟಿಗೆ ತನ್ನ ಮನಸ್ಸು ಮತ್ತು ಆತ್ಮದ ವಿಕಾಸವನ್ನೂ ಸಾಧಿಸುತ್ತಿರುವವನು ಇನ್ನೆಷ್ಟು ಗಳಿಸಬಹುದು?"

ಹರಿಜನ್, 11–6–'38

## 21

# ಮುಕ್ತಾಯ

ಮೂಲ ಶಿಕ್ಷಣವು ದೇಶದ ಪ್ರಸಕ್ತ ಪರಿಸ್ಥಿತಿಯ ಕಾರಣದಿಂದಾಗಿಯೇ ಹೊರಹೊಮ್ಮಿದೆ ಹಾಗೂ ಆ ಪರಿಸ್ಥಿತಿಗೆ ಒಂದು ಸೂಕ್ತ ಪ್ರತಿಕ್ರಿಯೆಯಾಗಿದೆ. ಹಾಗಾಗಿ ಅದು ಆ ವಾತಾವರಣದ ಜೊತೆ ನಿರ್ವಹಿಸಲಾಗುವಂತೆ ರೂಪಿತವಾಗಿದೆ. ಇದು ಭಾರತದ ಏಳು ಲಕ್ಷ ಹಳ್ಳಿ ಮತ್ತು ಅಲ್ಲಿರುವ ಹಳ್ಳಿಗರ ಪರಿಸ್ಥಿತಿ. ಅವರನ್ನು ಮರೆತರೆ ಭಾರತವನ್ನೇ ಮರೆತಂತೆ. ಭಾರತವಿರುವುದು ನಮ್ಮ ನಗರಗಳಲ್ಲಲ್ಲ,ಬದಲಾಗಿ ಅದಿರುವುದು ಇಲ್ಲಿನ ಅಸಂಖ್ಯಾತ ಹಳ್ಳಿಗಳಲ್ಲಿ.

ಮೂಲ ಶಿಕ್ಷಣದ ಪ್ರಧಾನ ಭೂಮಿಕೆ ಇದು:

1. ಯಾವುದೇ ನಿಜವಾದ ಶಿಕ್ಷಣವು ಸ್ವಯಂ ಪೋಷಿತವಾಗಿರಬೇಕು. ಅಂದರೆ, ಕೊನೆಯಲ್ಲಿ ಅದು ತನ್ನ ಖರ್ಚುಗಳನ್ನು ತಾನೇ ಗಳಿಸಬೇಕು. ಬಂಡವಾಳದ ಸ್ವರೂಪದ ಖರ್ಚುಗಳು ಇದರ ಹೊರಗಿದ್ದು ಅವು ಶಾಶ್ವತವಾಗಿ ಉಳಿದುಕೊಳ್ಳುತ್ತವೆ.
2. ಇಲ್ಲಿ ಕೊನೆಯ ಹಂತದವರೆಗೂ ಮಕ್ಕಳ ಕೈಕೆಲಸದ ಕೌಶಲವನ್ನು ಬಳಕೆ ಮಾಡಿಕೊಳ್ಳಲಾಗುತ್ತದೆ. ಇದರರ್ಥವೆಂದರೆ, ದಿನದ ಒಂದು ನಿರ್ದಿಷ್ಟ ಅವಧಿಯಲ್ಲಿಮಕ್ಕಳು ಯಾವುದಾದರೊಂದು ಉದ್ದಿಮೆಗೆ ಸಂಬಂಧಿಸಿದ ಕುಶಲಕರ್ಮ ಮಾಡುತ್ತಿರುತ್ತಾರೆ.
3. ಪ್ರಾಂತೀಯ ಭಾಷಾ ಮಾಧ್ಯಮದ ಮೂಲಕವೇ ಎಲ್ಲ ಶಿಕ್ಷಣವನ್ನೂ ನೀಡಬೇಕು.
4. ಇಲ್ಲಿ ಧಾರ್ಮಿಕ ತರಬೇತಿಗೆ ಒಂದಷ್ಟೂ ಎಡೆಯಿಲ್ಲ. ಮೂಲಭೂತ ಸಾರ್ವತ್ರಿಕ ನೈತಿಕತೆಗೆ ಸಂಪೂರ್ಣ ಅವಕಾಶವಿರುತ್ತದೆ.
5. ಮಕ್ಕಳಾಗಲೀ, ದೊಡ್ಡವರಾಗಲೀ, ಗಂಡಾಗಲೀ, ಹೆಣ್ಣಾಗಲೀ ಯಾರೇ ಈ ಶಿಕ್ಷಣವನ್ನು ಪಡೆದರೂ ಅದು ಕೊನೆಗೆ ವಿದ್ಯಾರ್ಥಿಗಳ ಮನೆಯನ್ನು ತಲುಪುತ್ತದೆ.
6. ಈ ಶಿಕ್ಷಣವನ್ನು ಪಡೆಯುವ ಕೋಟ್ಯಂತರ ಮಕ್ಕಳು ತಾವು ವಿಶಾಲ ಭಾರತದವರೆಂದು ಭಾವಿಸುವುದರಿಂದ ಅವರು ಒಂದು ಅಂತರಪ್ರಾಂತೀಯ ಭಾಷೆಯನ್ನೂ ಕಲಿಯಬೇಕು. ಇದಕ್ಕೆ ಸೂಕ್ತ ಭಾಷೆ ಹಿಂದೂಸ್ತಾನಿ ಮತ್ತು ಲಿಪಿ ದೇವನಾಗರಿ ಅಥವಾ ಉರ್ದು. ಹಾಗಾಗಿ ವಿದ್ಯಾರ್ಥಿಗಳು ಎರಡೂ ಲಿಪಿಗಳನ್ನು ಅಭ್ಯಾಸ ಮಾಡಬೇಕು.

ಹರಿಜನ್, 2–11–'47

